CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೫, ೨೦೦೪ (ಮಾಘ ೧೬ ಶಕ ವರ್ಷ ೧೯೨೫) | ಸಂಚಿಕೆ ೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ

### ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಗಳು

**ವಿಷಯ:** ಸಮಾಪನೆಯಲ್ಲಿರುವ ಸಹಕಾರ ಸಂಘಗಳ ನೋಂದಣಿ ರದ್ದತಿ ಮಾಡುವ ವಿಚಾರ.

**ಉಲ್ಲೇಖ:**
1. ಬೆಂಗಳೂರು ವಿಭಾಗೀಯ ಸಂಯುಕ್ತ ನಿಬಂಧಕರ ಆದೇಶ ಸಂಖ್ಯೆ:ಜೆಆರ್‌ಬಿ:ಸಮಾಪನೆ:36:98-99 ದಿನಾಂಕ:30-11-1999.
2. ಉಪನಿಬಂಧಕರು-2, ಬೆಂಗಳೂರು ರವರ ಪ್ರಸ್ತಾವೆ ಸಂಖ್ಯೆ.ಡಿಆರ್‌ಬಿ-2:ಸಮಾಪನೆ-7:2001-02 ದಿನಾಂಕ: 14-6-2001.
3. ಸಹಾಯಕ ನಿಬಂಧಕರು-2, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಎಆರ್‌ಬಿ-45: ಸಮಾಪನೆ: 25:2003-04 ದಿನಾಂಕ:31-10-2003.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲೆ-2ರ ವ್ಯಾಪ್ತಿಗೊಳಪಡುವ 23 ವಿವಿಧ ಸಹಕಾರ ಸಂಘಗಳನ್ನು ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿದೆ. ಹಾಗೂ ನಗರ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 2ನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಈ ಪೈಕಿ 17 ಸಹಕಾರ ಸಂಘಗಳ ನೋಂದಣಿ ರದ್ದತಿಗಾಗಿ ಉಲ್ಲೇಖ (2) ಹಾಗೂ (3)ರಲ್ಲಿ ಪ್ರಸ್ತಾವೆ ಸ್ವೀಕರಿಸಲಾಗಿದೆ. ಈ 17 ಸಹಕಾರ ಸಂಘಗಳ ಪೈಕಿ ಕೆಳಕಂಡ 05 ಸಹಕಾರ ಸಂಘಗಳ ಆಸ್ತಿ-ಜವಾಬ್ದಾರಿಗಳ ಬಗ್ಗೆ ದಿನಾಂಕ:25-2-1999 ರಲ್ಲಿ 'ಸಂಜೆವಾಣಿ' ದಿನಪತ್ರಿಕೆಯಲ್ಲಿ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಲಾಗಿದ್ದು, ಈ ಸಂಘಗಳ ಬಗ್ಗೆ ಹಿತಾಸಕ್ತಿಯುಳ್ಳ ಸದಸ್ಯರಾಗಲೀ, ಆಡಳಿತ ಮಂಡಳಿ ಸದಸ್ಯರಾಗಲೀ ಪ್ರತಿಕ್ರಯಿಸಿರುವುದಿಲ್ಲ. ಈ ಸಂಘಗಳ ಅಸ್ಥಿತ್ವದ ಬಗ್ಗೆ ಯಾವುದೇ ಮಾಹಿತಿಗಳು ಲಭ್ಯವಾಗಿರುವುದಿಲ್ಲ. ಈ ಕಾರಣಗಳಿಂದಾಗಿ ಸಂಘಗಳನ್ನು ಸಮಾಪನಾವಸ್ಥೆಯಲ್ಲಿ ಮುಂದುವರೆಸುವುದರಿಂದ ಯಾವ ಪ್ರಯೋಜನವಿಲ್ಲವಾಗಿ ಉಪನಿಬಂಧಕರು ಹಾಗೂ ಸಹಾಯಕ ನಿಬಂಧಕರವರು ವರದಿ ಸಲ್ಲಿಸಿದ್ದು, ಈ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಪ್ರಸ್ತಾವೆ ಸಲ್ಲಿಸಿದ್ದಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ, ಈ ಸಂಘಗಳ ಅಸ್ಥಿತ್ವದ ಬಗ್ಗೆ ಯಾವುದೇ ಮಾಹಿತಿ ಇಲ್ಲದ ಕಾರಣ, ಇವುಗಳನ್ನು ಸಮಾಪನಾವಸ್ಥೆಯಲ್ಲಿ ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವ ಪ್ರಯೋಜನ ಇಲ್ಲದ ಕಾರಣ ಇವುಗಳ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಸೂಕ್ತವೆಂದು ಪರಿಗಣಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

### ಆದೇಶ

**ಕ್ರಮ ಸಂಖ್ಯೆ:ಜೆಆರ್‌ಬಿ:ಎಲ್‌ಕ್ಯೂಡಿ:36:ಎಲ್‌ಎಂಸಿ:1998-99, ದಿನಾಂಕ: 9ನೇ ಡಿಸೆಂಬರ್ 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿ:21-11-2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಸವೇಗೌಡ, ಸಹಕಾರ ಸಂಘಗಳ ಜಂಟಿ

ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ಕೆಳಕಂಡ ಸಮಾಪನೆಯಲ್ಲಿರುವ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

| ಕ್ರ. ಸಂ. | ಸಂಘದ ಹೆಸರು | ನೋಂದಣಿ ಸಂಖ್ಯೆ |
|---|---|---|
| 01 | ಎಂ.ಎಸ್.ಪಿ. ರೇಡಿಯೋ ಸ್ಟ್ಯಾಫ್ ಕ್ರೆಡಿಟ್ ಸಹಕಾರ ಸಂಘ ನಿ., ಎಂ.ಜಿ. ರಸ್ತೆ, ಬೆಂಗಳೂರು. | ಎಆರ್‌ಬಿ:ಆರ್‌ಜಿಎನ್:227: 66-67 ದಿ:13-7-66. |
| 02 | ಗೌರ್ನಮೆಂಟ್, ಕ್ವಾಜೀ ಗೌರ್ನಮೆಂಟ್ ಎಂಪ್ಲಾಯೀಸ್ ಕ್ರೆಡಿಟ್ ಸಹಕಾರ ಸಂಘ ನಿ., ಬೆಂಗಳೂರು. | ಎಆರ್‌ಬಿ1:ಸಿ.ಕ್ರೆಡಿಟ್:243: 66-67 ದಿ:7-2-67. |
| 03 | ಕನ್ನಡ ಕಲಾಕ್ಷೇತ್ರ (ಬಾಂಬೆ) ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿ., ಎಸ್.ಆರ್.ನಗರ, ಬೆಂಗಳೂರು. | ಜೆಆರ್‌ಬಿ:ಆರ್‌ಎಸ್‌ಆರ್:ಆರ್‌ಜಿಎಸ್:6: 71-72 ದಿ:7-8-71. |
| 04 | ರೆವಿನ್ಯೂ ಮತ್ತು ಎಂಡೋಮೆಂಟ್ ಡಿಪಾರ್ಟ್‌ಮೆಂಟ್ ಎಂಪ್ಲಾಯೀಸ್ ಸಹಕಾರ ಸಂಘ-ನಿಯಮಿತ, ಬೆಂಗಳೂರು. | ಡಿಬಿ:188:50-51: ದಿ:5-1-1951. |
| 05 | ಬೆಂಗಳೂರು ಎಕ್ಸ್ ಸರ್ವೀಸ್ ಇಂಡಸ್ಟ್ರಿಯಲ್ ಕ್ರೆಡಿಟ್ ಸಹಕಾರ ಸಂಘ ನಿ., ಬೆಂಗಳೂರು. | ನಂ.246: ದಿ:10-12-1956. |
| 06 | ಗಾರ್ಡ್‌ನರ್ಸ್ ಸಹಕಾರ ಸಂಘ ನಿ., ಬೆಂಗಳೂರು. | ಎಆರ್‌ಬಿ:951: ದಿ:22-11-57. |
| 07 | ಕನ್ನಡ ಫಿಲಂ ಆರ್ಟಿಸ್ಟ್ಸ್ ಗೃಹನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು. | ಎಆರ್‌ಬಿ2:ಆರ್‌ಜಿಎಸ್:ಡಿಆರ್-36: ದಿ:25-12-1966. |
| 08 | ಸಿಟಿಜನ್ ಹೋಲ್‌ಸೇಲ್ ಇಂಡಸ್ಟ್ರಿಯಲ್ ಸಹಕಾರ ಸಂಘ ನಿ., ಬೆಂಗಳೂರು. | ಡಿವೈಆರ್:ಬಿಎಲ್:13:ಆರ್‌ಇಸಿ:729: 69-70 ದಿ:6-4-1970. |

ಈ ರದ್ದತಿಯ ಆದೇಶದ ದಿನಾಂಕದಿಂದ ಮೇಲ್ಕಂಡ 08 ಸಹಕಾರ ಸಂಘಗಳ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿರುತ್ತದೆಂದು ಮತ್ತು ಸಂಘಗಳು ಅಸ್ತಿತ್ವದಲ್ಲಿಲ್ಲವೆಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:09ನೇ ಡಿಸೆಂಬರ್ 2003 ರಂದು ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 57

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018

## ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ/ಎಂಡಿ/5872/2003-04, ದಿನಾಂಕ: 31ನೇ ಡಿಸೆಂಬರ್ 2003

**ವಾದಿ**

ಪ್ರಧಾನ ವ್ಯವಸ್ಥಾಪಕರು
ಶ್ರೀ ಸುಬ್ರಹ್ಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ,
ನಂ.108, ಆರ್.ವಿ. ರಸ್ತೆ, ವಿಶ್ವೇಶ್ವರ ಪುರಂ,
ಬೆಂಗಳೂರು.-560 004

**ಪ್ರತಿವಾದಿಗಳು**

1. ಶ್ರೀ ಆರ್. ಲೋಕನಾಥ್ ಬಿನ್ ಲೇಟ್ ರಾಮಾನುಜಪ್ಪ
   ನಂ.134/1, 35ನೇ ಅಡ್ಡ ರಸ್ತೆ, 4ನೇ ಟಿ ಬ್ಲಾಕ್,
   ಜಯನಗರ, ಬೆಂಗಳೂರು - 560 011.
2. ಮೆ॥ ಶಶಾಂಕ್ ಅಪಾರೆಲ್ಸ್
   ಮಾಲೀಕರು: ಶ್ರೀಮತಿ ಗಿರಿಜಾ ಲೋಕನಾಥ್
   ನಂ.5ಎ, ನಾಗಾವರ ಪಾಳ್ಯ, ಚೇತನ ಥಿಯೇಟರ್ ರಸ್ತೆ,
   ಸಿ.ವಿ.ರಾಮನ್ ನಗರ, ಬೆಂಗಳೂರು - 560 093.

### 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.15,22,776/- ಗಳನ್ನು ದಿನಾಂಕ 5-12-2003ರಿಂದ ಶೇಕಡಾ 16 ರಂತೆ ಬಡ್ಡಿ ಮತ್ತು ಶೇ.2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ/ಎಂಡಿ/5872/2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯವರು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ; ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ : ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ: 21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು, ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.15,22,776/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ 30-1-2004ರ ಒಳಗಾಗಿ ಅಧಿಕೃತ ಚಲನ್ / ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್ ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ನಗರ (ಬೆಂಗಳೂರು - 560 079) ದಲ್ಲಿರುವ ಬಸವೇಶ್ವರ ನಗರ, 4ನೇ ಬ್ಲಾಕ್, 3ನೇ ಹಂತ, ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿರುವ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ, ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಅಳತೆಯ ನಿವೇಶನದಲ್ಲಿ ಕಟ್ಟಲಾಗಿರುವ ನಿವೇಶನ ಸಂಖ್ಯೆ 177 ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ನಿವೇಶನ ಸಂಖ್ಯೆ 216 |
| ಉತ್ತರಕ್ಕೆ | : | ನಿವೇಶನ ಸಂಖ್ಯೆ 176 |
| ದಕ್ಷಿಣಕ್ಕೆ | : | ನಿವೇಶನ ಸಂಖ್ಯೆ 178 |

(ಈ ಆಸ್ತಿ 1ನೇ ಪ್ರತಿವಾದಿಗೆ ಸೇರಿದ್ದಾಗಿದೆ)

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 31-12-2003 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 58 ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ,**

**ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018**

**ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ/ಎಂಡಿ/5871/2003-04, ದಿನಾಂಕ: 31ನೇ ಡಿಸೆಂಬರ್ 2003**

**ವಾದಿ**

ಪ್ರಧಾನ ವ್ಯವಸ್ಥಾಪಕರು
ಶ್ರೀ ಸುಬ್ರಹ್ಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ,
ನಂ.108, ಆರ್.ವಿ. ರಸ್ತೆ, ವಿಶ್ವೇಶ್ವರ ಪುರಂ,
ಬೆಂಗಳೂರು-560 004

**ಪ್ರತಿವಾದಿಗಳು**

1. ಮೆ|| ಶಶಾಂಕ್ ಅಪಾರೆಲ್ಸ್
ಸಿದ್ದ ಉಡುಪು ತಯಾರಿಕಾ ಘಟಕ
ಪ್ರತಿನಿಧಿಸುವವರು:
ಮಾಲೀಕರು: ಶ್ರೀಮತಿ ಗಿರಿಜಾ ಲೋಕನಾಥ್
ನಂ.5ಎ, ನಾಗಾವರ ಪಾಳ್ಯ, ಚೇತನ ಥಿಯೇಟರ್ ರಸ್ತೆ,
ಸಿ.ವಿ.ರಾಮನ್ ನಗರ, ಬೆಂಗಳೂರು - 560 093.

2. ಶ್ರೀ ಆರ್. ಲೋಕನಾಥ್ ಬಿನ್ ಲೇಟ್ ರಾಮಾನುಜಪ್ಪ
ನಂ.134/1, 35ನೇ ಅಡ್ಡ ರಸ್ತೆ, 4ನೇ ಟಿ ಬ್ಲಾಕ್,
ಜಯನಗರ, ಬೆಂಗಳೂರು - 560 011.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.29,50,339/- ಗಳನ್ನು ದಿನಾಂಕ 5-12-2003ರಿಂದ ಶೇಕಡಾ 18 ರಂತೆ ಬಡ್ಡಿ ಮತ್ತು ಶೇ.2 ರಂತೆ ಸುಸ್ತಿ ಬಡ್ಡಿ ಮತ್ತು ಶೇ.2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ/ಎಂಡಿ/5871/2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯವರು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ; ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ : ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ: 21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು, ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.29,50,399/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ 30-1-2004ರ ಒಳಗಾಗಿ ಅಧಿಕೃತ ಚಲನ್ / ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್ ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ನಗರ (ಬೆಂಗಳೂರು - 560 079) ದಲ್ಲಿರುವ ಬಸವೇಶ್ವರ ನಗರ, 4ನೇ ಬ್ಲಾಕ್, 3ನೇ ಹಂತ, ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿರುವ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ, ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಅಳತೆಯ ನಿವೇಶನದಲ್ಲಿ ಕಟ್ಟಲಾಗಿರುವ ನಿವೇಶನ ಸಂಖ್ಯೆ 177 ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ನಿವೇಶನ ಸಂಖ್ಯೆ 216 |
| ಉತ್ತರಕ್ಕೆ | : | ನಿವೇಶನ ಸಂಖ್ಯೆ 176 |
| ದಕ್ಷಿಣಕ್ಕೆ | : | ನಿವೇಶನ ಸಂಖ್ಯೆ 178 |

(ಈ ಆಸ್ತಿ 2ನೇ ಪ್ರತಿವಾದಿಗೆ ಸೇರಿದ್ದಾಗಿದೆ)

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 31-12-2003 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 59 ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಕೆಗಳು

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇರ ನೇಮಕಾತಿ ಮೂಲಕ ಪ್ರಥಮ ದರ್ಜೆ ಸಹಾಯಕರೆಂದು ನೇಮಕಗೊಂಡ ಶ್ರೀಮತಿ ಹೆಚ್.ಟಿ. ಲಲಿತಾ W/o R. ವಾಸುದೇವ, ಹುಳಿಯಾರು ರಸ್ತೆ ಪೋಸ್ಟ್, ಆಫೀಸ್, ಹಿರಿಯೂರು ಇವರ ನೇಮಕಾತಿ ಆದೇಶವನ್ನು ರದ್ದು ಪಡಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆನೆನಿ 2001 ದಿನಾಂಕ:13-02-01.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ: 08-02-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 01-06-2002 (ದಿನಾಂಕ: 14-06-2002 ರಂದು ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 30-1-2002. (ದಿನಾಂಕ: 14-02-2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
6. ಈ ಕಛೇರಿಯ ಸಮಸಂಖ್ಯೆ ಅಂತಿಮ ಆಯ್ಕೆ ಪಟ್ಟಿ ದಿನಾಂಕ: 24-11-03.
7. ಈ ಕಛೇರಿಯ ಸಮಸಂಖ್ಯೆ ನೇಮಕಾತಿ ಆದೇಶ ದಿನಾಂಕ: 05-12-2003.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಮೂರು ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವುದಕ್ಕಾಗಿ ಉಲ್ಲೇಖ (1) ಮತ್ತು (2) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಉಲ್ಲೇಖ (5)ರ ಈ ಕಛೇರಿಯ ದಿನಾಂಕ: 30-01-2002ರ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

ಸದರಿ ಅಧಿಸೂಚನೆಗೆ ಅನುಗುಣವಾಗಿ ಬಂದ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ, ಅವುಗಳ ಪೈಕಿ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳ ಪೈಕಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದ ಮೂರು ಅರ್ಹ ಅಭ್ಯರ್ಥಿಗಳನ್ನು (Merit) ಅರ್ಹತೆಯ ಆಧಾರದ ಮೇಲೆ ಅಂತಿಮವಾಗಿ ಪ್ರಥಮ ದರ್ಜೆ ಸಹಾಯಕರೆಂದು ಆಯ್ಕೆ ಮಾಡಿ ಉಲ್ಲೇಖ (6) ರನ್ವಯ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ದಿನಾಂಕ: 24-11-2003 ರಂದು ಪ್ರಕಟಿಸಲಾಯಿತು.

ಈ ರೀತಿ ಉಲ್ಲೇಖ (6) ರನ್ವಯ ದಿನಾಂಕ: 24-11-2003 ರಂದು ಪ್ರಕಟಿಸಿದ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿಯ ಮೂಲಕ ಮಹಿಳಾ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಶ್ರೀಮತಿ ಹೆಚ್.ಟಿ. ಲಲಿತಾ W/o R. ವಾಸುದೇವ, ಹುಳಿಯಾರು ರಸ್ತೆ, ಪೋಸ್ಟ್ ಆಫೀಸ್, ಹಿರಿಯೂರು ಇವರನ್ನು ಪ್ರಥಮ ದರ್ಜೆ ಸಹಾಯಕರೆಂದು ಅಂತಿಮವಾಗಿ ಆಯ್ಕೆ ಮಾಡಿದ್ದರಿಂದ ಸದರಿಯವರನ್ನು ಪ್ರಥಮ ದರ್ಜೆ ಸಹಾಯಕರೆಂದು ಈ ಇಲಾಖೆಯಲ್ಲಿ ನೇಮಕ ಮಾಡಿ ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಪ್ರಥಮ ದರ್ಜೆ ಸಹಾಯಕರೆಂದು ಉಲ್ಲೇಖ (7) ರನ್ವಯ ದಿನಾಂಕ: 05-12-2003 ರಂದು (ಸ್ಥಳ ನಿಯುಕ್ತಿ) ನೇಮಕ ಮಾಡಲಾಯಿತು ಹಾಗೂ ಸದರಿ ನೇಮಕಾತಿ ಆದೇಶದಲ್ಲಿ ಈ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳ ಒಳಗೆ ನಿಯುಕ್ತಿಗೊಳಿಸಿದ ಕಛೇರಿಯಲ್ಲಿ ಕೆಲಸಕ್ಕೆ ತಪ್ಪದೇ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಅಭ್ಯರ್ಥಿಗಳಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ವಿದ್ಯಾರ್ಹತೆ | ಅಭ್ಯರ್ಥಿಯನ್ನು ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿ | ಅಭ್ಯರ್ಥಿಯನ್ನು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿತ್ತೋ ಅದರ ವಿವರ |
|---|---|---|---|---|
| 1. | ಶ್ರೀಮತಿ ಹೆಚ್.ಟಿ. ಲಲಿತಾ W/o R. ವಾಸುದೇವ, ಹುಳಿಯಾರು ರಸ್ತೆ, ಪೋಸ್ಟ್ ಆಫೀಸ್, ಹಿರಿಯೂರು-572143 | B.H.Sc | ಕೇಂದ್ರ ಕಛೇರಿ, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು. | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ |

ಮೇಲ್ಕಂಡ ಅಭ್ಯರ್ಥಿಯು ದಿನಾಂಕ: 05-12-2003ರ ಈ ಕಛೇರಿಯ ಉಲ್ಲೇಖ (7)ರ ನೇಮಕಾತಿ ಆದೇಶವನ್ನು ದಿನಾಂಕ: 12-12-2003 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಈ ತಹಲ್‌ವರೆವಿಗೂ ಈ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ (15) ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 27-12-2003 ರಂದು ಮುಕ್ತಾಯವಾಗಿರುತ್ತದೆ. ದಿನಾಂಕ: 05-12-2003 ರಂದು ಹೊರಡಿಸಿದ ಉಲ್ಲೇಖ (7)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ, ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದು ಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST 1-270:2001-02, ದಿನಾಂಕ: 9ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1) ರಲ್ಲಿನ ಅಧಿಸೂಚನೆ ಅನ್ವಯ ಹಾಗೂ 1977ರ ಸಾಮಾನ್ಯ ನೇಮಕಾತಿ ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಹೆಚ್.ಟಿ. ಲಲಿತಾ W/o R. ವಾಸುದೇವ, ಹುಳಿಯಾರು ರಸ್ತೆ ಪೋಸ್ಟ್ ಆಫೀಸ್, ಹಿರಿಯೂರು ಇವರನ್ನು ಈ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಉಲ್ಲೇಖ (7) ರನ್ವಯ ದಿನಾಂಕ: 05-12-2003 ರಂದು ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದು ಕೊಂಡಿರುವರೆಂದು ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಸದರಿಯವರು ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು
ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್. 60

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಕೆಗಳು**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇರ ನೇಮಕಾತಿ ಮೂಲಕ ಪ್ರಥಮ ದರ್ಜೆ ಸಹಾಯಕರೆಂದು ನೇಮಕಗೊಂಡ ಶ್ರೀ ಶಂಕರಪ್ಪ ಡೊಳ್ಳಿನ S/o ರಾವತಪ್ಪ ಮು: ಪೋಸ್ಟ್: ಮಣೂರ, ಸಿಂಧಿಗಿ ತಾಲ್ಲೂಕು ಇವರ ನೇಮಕಾತಿ ಆದೇಶವನ್ನು ರದ್ದು ಪಡಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆನೆನಿ 2001 ದಿನಾಂಕ:13-02-01.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ: 08-02-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 01-06-2002 (ದಿನಾಂಕ: 14-06-2002 ರಂದು ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 30-1-2002. (ದಿನಾಂಕ: 14-02-2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
6. ಈ ಕಛೇರಿಯ ಸಮಸಂಖ್ಯೆ ಅಂತಿಮ ಆಯ್ಕೆ ಪಟ್ಟಿ ದಿನಾಂಕ: 24-11-03.
7. ಈ ಕಛೇರಿಯ ಸಮಸಂಖ್ಯೆ ನೇಮಕಾತಿ ಆದೇಶ ದಿನಾಂಕ: 05-12-2003.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಮೂರು ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವುದಕ್ಕಾಗಿ ಉಲ್ಲೇಖ (1) ಮತ್ತು (2) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಉಲ್ಲೇಖ (5)ರ ಈ ಕಛೇರಿಯ ದಿನಾಂಕ: 30-01-2002ರ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

ಸದರಿ ಅಧಿಸೂಚನೆಗೆ ಅನುಗುಣವಾಗಿ ಬಂದ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ, ಅವುಗಳ ಪೈಕಿ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳ ಪೈಕಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದ ಮೂರು ಅರ್ಹ ಅಭ್ಯರ್ಥಿಗಳನ್ನು (Merit) ಅರ್ಹತೆಯ ಆಧಾರದ ಮೇಲೆ ಅಂತಿಮವಾಗಿ ಪ್ರಥಮ ದರ್ಜೆ ಸಹಾಯಕರೆಂದು ಆಯ್ಕೆ ಮಾಡಿ ಉಲ್ಲೇಖ (6) ರನ್ವಯ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ದಿನಾಂಕ: 24-11-2003 ರಂದು ಪ್ರಕಟಿಸಲಾಯಿತು.

ಈ ರೀತಿ ಉಲ್ಲೇಖ (6) ರನ್ವಯ ದಿನಾಂಕ: 24-11-2003 ರಂದು ಪ್ರಕಟಿಸಿದ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿಯ ಮೂಲಕ ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಶ್ರೀ ಶಂಕರಪ್ಪ ಡೊಳ್ಳಿನ S/o ರಾವತಪ್ಪ ಮಣೂರ ಇವರನ್ನು ಪ್ರಥಮ ದರ್ಜೆ ಸಹಾಯಕರೆಂದು ಅಂತಿಮವಾಗಿ ಆಯ್ಕೆ ಮಾಡಿದ್ದರಿಂದ ಸದರಿಯವರನ್ನು ಪ್ರಥಮ ದರ್ಜೆ ಸಹಾಯಕರೆಂದು ಈ ಇಲಾಖೆಯಲ್ಲಿ ನೇಮಕ ಮಾಡಿ ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಪ್ರಥಮ ದರ್ಜೆ ಸಹಾಯಕರೆಂದು ಉಲ್ಲೇಖ (7) ರನ್ವಯ ದಿನಾಂಕ: 05-12-2003 ರಂದು (ಸ್ಥಳ ನಿಯುಕ್ತಿ) ನೇಮಕ ಮಾಡಲಾಯಿತು ಹಾಗೂ ಸದರಿ ನೇಮಕಾತಿ ಆದೇಶದಲ್ಲಿ ಈ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳ ಒಳಗೆ ನಿಯುಕ್ತಿಗೊಳಿಸಿದ ಕಛೇರಿಯಲ್ಲಿ ಕೆಲಸಕ್ಕೆ ತಪ್ಪದೇ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ವಿದ್ಯಾರ್ಹತೆ | ಅಭ್ಯರ್ಥಿಯನ್ನು ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿ | ಅಭ್ಯರ್ಥಿಯನ್ನು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿತ್ತೋ ಅದರ ವಿವರ |
|---|---|---|---|---|
| 1. | ಶಂಕರಪ್ಪ ಡೊಳ್ಳಿನ S/o ರಾವತಪ್ಪ ಮು: ಪೋಸ್ಟ್: ಮಣೂರ, ತಾ: ಸಿಂಧಗಿ, ಜಿಲ್ಲೆ: ಬಿಜಾಪುರ. | B.Sc. (Agri) | ಕೇಂದ್ರ ಕಛೇರಿ, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ ಬೆಂಗಳೂರು. | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ |

ಮೇಲ್ಕಂಡ ಅಭ್ಯರ್ಥಿಯು ದಿನಾಂಕ: 05-12-2003ರ ಈ ಕಛೇರಿಯ ಉಲ್ಲೇಖ (7)ರ ನೇಮಕಾತಿ ಆದೇಶವನ್ನು ದಿನಾಂಕ: 19-12-2003 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಈ ತಹಲ್‌ವರೆವಿಗೂ ಈ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ (15) ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 03-01-2004 ರಂದು ಮುಕ್ತಾಯವಾಗಿರುತ್ತದೆ. ದಿನಾಂಕ: 05-12-2003 ರಂದು ಹೊರಡಿಸಿದ ಉಲ್ಲೇಖ (7)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ, ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದು ಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST 1-270:2001-02, ದಿನಾಂಕ: 9ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1) ರಲ್ಲಿನ ಅಧಿಸೂಚನೆ ಅನ್ವಯ ಹಾಗೂ 1977ರ ಸಾಮಾನ್ಯ ನೇಮಕಾತಿ ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಶಂಕರಪ್ಪ ಡೊಳ್ಳಿನ S/o ರಾವತಪ್ಪ, ಮು: ಪೋಸ್ಟ್: ಮಣೂರ ಇವರನ್ನು ಈ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಉಲ್ಲೇಖ (7) ರನ್ವಯ ದಿನಾಂಕ: 05-12-2003 ರಂದು ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದು ಕೊಂಡಿರುವರೆಂದು ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಸದರಿಯವರು ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು
ಪಿ.ಆರ್. 61 ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಹಾವೇರಿ ಜಿಲ್ಲೆ ಇವರಿಂದ**

**ವಿಷಯ:** ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ರ ಅಡಿಯಲ್ಲಿ ಜಪ್ತಿ ಮಾಡಿದ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

ಈ ಕೆಳಕಂಡ ವಾಹನಗಳನ್ನು ಹಾವೇರಿ ಜಿಲ್ಲೆಯಲ್ಲಿ ವಿವಿಧ ಅಬಕಾರಿ ಪ್ರಕರಣಗಳಲ್ಲಿ ಜಪ್ತಿ ಮಾಡಿದ್ದು ಇರುತ್ತದೆ. ಸದರಿ ವಾಹನಗಳ ಮಾಲಿಕತ್ವ ಸ್ಥಾಪಿಸಲು ಇಂದಿನವರೆಗೆ ಯಾರೂ ಈ ಪ್ರಾಧಿಕಾರಕ್ಕೆ ಹಾಜರಾಗಿರುವುದಿಲ್ಲ ಮತ್ತು ಮನವಿ ಸಲ್ಲಿಸಿರುವುದಿಲ್ಲ. ಸಾರಿಗೆ ಇಲಾಖೆಯಿಂದ ಪಡೆಯಲಾದ ಮಾಹಿತಿಯ ಆಧಾರದ ಮೇಲೆ ಮಾಲಿಕರಿಗೆ ಕಳುಹಿಸಿದ ಪತ್ರಗಳು ವಿಲೇ ಆಗಿರುವುದಿಲ್ಲ. ಆದ್ದರಿಂದ ಈ ಪ್ರಕಟಣೆಯ ಹದಿನೈದು ದಿನಗಳ ಒಳಗೆ ಸದರಿ ವಾಹನದ ಮಾಲಿಕರು ತಮ್ಮ ಹಕ್ಕನ್ನು ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿ ಹಾಜರಾಗತಕ್ಕದ್ದು. ಇದೇ ಜಾಹೀರಾತನ್ನು ಸ್ಥಳೀಯ ಕನ್ನಡ ದಿನ ಪತ್ರಿಕೆಗಳಲ್ಲಿಯೂ ಪ್ರಕಟಿಸಲಾಗಿದೆ. ಆದಾಗ್ಯೂ ವಾಹನದ ಮಾಲಿಕತ್ವ ಕೋರಿ 15 ದಿನಗಳ ಒಳಗೆ ಯಾರೂ ಪ್ರಾಧಿಕಾರಕ್ಕೆ ಹಾಜರಾಗದಿದ್ದಲ್ಲಿ ಅಥವಾ ಅರ್ಜಿ ಸಲ್ಲಿಸದೇ ಇದ್ದಲ್ಲಿ ಅಬಕಾರಿ ಕಾನೂನು 43 (ಎ) ಅಡಿಯಲ್ಲಿ ಅಂಥಹ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಪ್ರಾಧಿಕೃತ ಅಧಿಕಾರಿಗಳು ಮತ್ತು ಡೆಪ್ಯೂಟಿ ಕಮೀಶನರ್ ಆಫ್
ಎಕ್ಸೈಜ್, ಹಾವೇರಿ ಜಿಲ್ಲೆ, ಹಾವೇರಿ.

## ಅನುಬಂಧ - 1

| ಕ್ರ. ಸಂ. | ಪ್ರಥಮ ವರ್ತಮಾನ ವರದಿ ನಂ/ದಿನಾಂಕ ಗುನ್ಹೆ ದಾಖಲು ಮಾಡಿದ ಅಧಿಕಾರಿ | ವಾಹನದ ನೋಂದಣಿ ಸಂಖ್ಯೆಯ ಫಲಕ | ಇಂಜಿನ್ ನಂಬರ್ | ಚಾಸಿಸ್ ನಂಬರ್ | ಜಪ್ತಿ ಮಾಡಿದ ಮಾದಕ ದ್ರವ್ಯಗಳ ವಿವರ |
|---|---|---|---|---|---|
| 1 | ಸಿ.ಆರ್.ನಂ: 16/2002-03 ದಿನಾಂಕ:27/07/2002<br>ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ಹಾವೇರಿ ಉಪವಿಭಾಗ. | ಅಂಬಾಸಿಡರ್ ಕಾರ್ ನಂ: ಕೆ ಎ-25/3279 | - | - | 30X48X180 ಎಂ.ಎಲ್. ಡಾಲರ್ ವಿಸ್ಕಿ<br>5X48X180 ಎಂ.ಎಲ್. ಖೋಡೆಸ್ ತ್ರಿ ಎಕ್ಸ್ ರಂ |
| 2 | ಸಿ.ಆರ್.ನಂ: 29/2002-03 ದಿನಾಂಕ:25/10/2002<br>ಅಬಕಾರಿ ಸಬ್ ಇನ್ಸ್‌ಪೆಕ್ಟರ್, ರಾಣೇಬೆನ್ನೂರ ಉಪ ವಲಯ. | ಬಜಾಜ್ ಎಂ-80 ನಂ:ಸಿಟಿಯು-1444 | 16 ಇ 031772 | 16 ಸಿ 031073 | 1X48X180 ಎಂ.ಎಲ್. ರಾಜಾ ವಿಸ್ಕಿ |
| 3 | ಸಿ.ಆರ್.ನಂ: 139/2002 ದಿನಾಂಕ: 04/10/2002<br>ಸಿ.ಪಿ.ಐ ಹಾವೇರಿ | ಅಂಬಾಸಿಡರ್ ಕಾರ್ ನಂ: ಸಿಟಿಡಬ್ಲ್ಯೂ 78 | ಓ ಇ ಎಫ್ 6189 | 111-132111 | 21X48X180 ಎಂ.ಎಲ್. ಖೋಡೆಸ್ ತ್ರಿ ಎಕ್ಸ್ ರಂ<br>10X48X180 ಎಂ.ಎಲ್. ಓಲ್ಡ್ ಟಾವರಿನ್ ವಿಸ್ಕಿ ನಾಶಪಡಿಸಲಾಗಿದೆ. |
| 4 | ಸಿ.ಆರ್.ನಂ:35/2002-03 ದಿನಾಂಕ:28/03/2003<br>ಅಬಕಾರಿ ಇನ್ಸ್‌ಪೆಕ್ಟರ್ ರಾಣೇಬೆನ್ನೂರ ಉಪವಿಭಾಗ. | ಟಾಟಾ ಲಾರಿ ನಂ: ಸಿ ಎನ್ ಬಿ-5211 | 692 ಡಿ 02798437 | 344052794678 | 40X48X180 ಎಂ.ಎಲ್. ಒರಿಜಿನಲ್ ಚಾಯ್ಸ್ ವಿಸ್ಕಿ<br>45X48X180 ಎಂ.ಎಲ್. ಖೋಡೆ ತ್ರಿ ಎಕ್ಸ್ ರಂ<br>40X48X180 ಎಂ.ಎಲ್. ಬೆಗ್ ಪೈಪರ್ ವಿಸ್ಕಿ<br>35X48X180 ಎಂ. ಓಲ್ಡ್ ಟಾವರಿನ್ ವಿಸ್ಕಿ ನಾಶಪಡಿಸಲಾಗಿದೆ. |
| 5 | ಸಿ.ಆರ್.ನಂ:01/2002-03 ದಿನಾಂಕ: 08/05/2003<br>ಅಬಕಾರಿ ಸಬ್ ಇನ್ಸ್‌ಪೆಕ್ಟರ್ ರಾಣೇಬೆನ್ನೂರ ಉಪವಿಭಾಗ. | ಅಶೋಕ ಲೈಲ್ಯಾಂಡ್ ಲಾರಿ ನಂ: ಕೆ ಎ-02 ಎಎ-9369 | ಎ ಎಲ್ ಇ ಜಿ 29103 | ಎಎಲ್ ಜಿ 168679 | 550X48X180 ಎಂ.ಎಲ್. ಬೆಸ್ಟೊ ವಿಸ್ಕಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. |
| 6 | ಸಿ.ಆರ್.ನಂ: 30/00-01 ದಿನಾಂಕ:25/11/2000<br>ಇ ಐ IV, ರಾಜ್ಯ ಇ ಐ ಬಿ | ಟ್ಯಾಂಕರ್ ನಂ:ಟಿಎನ್-09-ಎ-6928 | - | - | 12000 Liter ಆರ್‌ಎಸ್ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. |

ಪ್ರಾಧಿಕೃತ ಅಧಿಕಾರಿಗಳು ಮತ್ತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಹಾವೇರಿ ಜಿಲ್ಲೆ, ಹಾವೇರಿ.

ಪಿ.ಆರ್. 62

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-48/2003**

**Applicants:** V/s **Respondents:**

Applicants:
1. Smt Zaheeda Bee W/o Late Md Iquabal Age 26 Years Occ: House hold R/o Maniknagar Humnabad Now at Bidar & 4 others

Respondents:
1. A. Sufuyan S/o Adbul Sattar Age Major Occ: Business R/o Hathi Khan Masjid Baroda
2. Oriental Insurance Co.Ltd., Baroda Gujarat State & D.M. Oriental Insurance Co. Ltd., Gulbarga

**PROCLAMATION**

Sri/Smt. Zaheeda Begum W/o. Mohd Iquabal R/o Maniknagar Humnabad Now at Bidar have/has filed application in this court claiming compensation stating that Late Md Iquabal was working as Driver Under the Respondent No I he met with an accident arising out of and during the course of employment as a result he died on 5.10.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this Proclamation. If no applications or objections are received within the specified date the court will proceeded further in the matter.

COMMISSIONER FOR WORKMEN'S COMPENSATION, BIDAR.

P.R. 67

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ ವಿಜಾಪುರ

### ಜ್ಞಾಪನ

**ವಿಷಯ:** ಶ್ರೀಮತಿ ಶಾರದಾ ಚಂದ್ರಶೇಖರಯ್ಯಾ, ಸರಗಣಾಚಾರ್ಯ, ಪ್ರಾಥಮಿಕ ಶಾಲಾ ಶಿಕ್ಷಕರು ಸರಕಾರಿ ಕನ್ನಡ ಗಂಡು ಮಕ್ಕಳ ಕಿರಿಯ ಪ್ರಾಥಮಿಕ ಶಾಲೆ ಬೆನಕೊಟಗಿ ಎಲ್‌ಟಿ ತಾ:ಸಿಂದಗಿ ಇವರ ಮೇಲೆ ಕರ್ನಾಟಕ ಸಿವಿಲ್ ಸೇವಾ ನಿಯಮಗಳು 1957 (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ರನ್ವಯ ಕ್ರಮ ಜರುಗಿಸುವ ಬಗ್ಗೆ.

**ಉಲ್ಲೇಖ:**
1) ಈ ಕಛೇರಿ ಪತ್ರ ಸಂ:ಇ2:2704:ಎಸ್‌ಸಿಎಸ್:ಪ್ರ:ಪ:23:2002-03 ದಿ:30-8-2002.
2) ಶ್ರೀಮತಿ ಎಸ್.ಸಿ. ಸರಗಣಾಚಾರ್ಯ ಅವರ ಪತ್ರ ದಿ:13-9-2002.
3) ಶ್ರೀ ಎಂ.ಬಿ. ಚಟ್ಟರ ಕಿ.ವಿ. ಪ ಅವರ ವರದಿ ದಿ:14-8-2002,13-1-2003.
4) ಈ ಕಛೇರಿ ಪತ್ರ ಸಮಸಂಖ್ಯೆ ದಿ:8-1-2003,16-7-2003,8-10-2003.
5) ಮಾನ್ಯ ನಿರ್ದೇಶಕರು ಈಶಾನ್ಯ ವಲಯ ನಿರ್ದೇಶನಾಲಯ ಗುಲ್ಬರ್ಗಾ ಅವರ ಪತ್ರ ಸಂ:ಅ1:ಈವ: ಸಿ3(3)ಪ್ರಾಶಿ:ಇತರೆ:ಸಾ:ಮಾ:ವಿ:8:3669:2002-03 ದಿ:11-12-2002.
6) ಮಾನ್ಯ ವಿಚಾರಣಾಧಿಕಾರಿಗಳು ಅವರ ಪತ್ರ ದಿ:14-10-2003.
7) ಮಾನ್ಯ ವಿಚಾರಣಾಧಿಕಾರಿಗಳು ಮತ್ತು ಮಂಡನಾಧಿಕಾರಿಗಳು ಅವರ ವರದಿ ದಿ:6-11-2003.
8) ಶ್ರೀಮತಿ ಎಸ್.ಸಿ. ಸರಗಣಾಚಾರ್ಯ ಅವರ ಸ್ವಇಚ್ಛೆ ರಾಜೀನಾಮೆ ದಿ:1-8-2003.
9) ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ಇವರ ಪತ್ರ ದಿ:12-8-2003 ಹಾಗೂ 23-10-2003.

**ಪ್ರಸ್ತಾವನೆ:**

ಉಲ್ಲೇಖದಲ್ಲಿ ನಮೂದಿಸಿರುವ ಪತ್ರ ಮತ್ತು ಶ್ರೀ ಎಂ.ಬಿ. ಚಟ್ಟರಕಿ.ವಿ ಪ ಅವರ ವರದಿಯಂತೆ ಇಲಾಖಾ ವಿಚಾರಣೆ ಮತ್ತು ಕ್ರಿಮಿನಲ್ ಮೊಕದ್ದಮೆ ಹೂಡುವ ವಿಚಾರ ಕಾಯ್ದಿರಿಸಿ ಶ್ರೀಮತಿ ಎಸ್ ಸಿ ಸರಗಣಾಚಾರ್ಯ ಪ್ರಾ ಶಿ ಅವರನ್ನು ಉಲ್ಲೇಖ 4ರಲ್ಲಿ ನಮೂದಿಸಿದ ದಿ:16-1-2003ರ ಪತ್ರದಲ್ಲಿ ಸಿ ಸಿ ಎ ನಿಯಮ 10(1)ರ ಪ್ರಕಾರ ದಿ:13-1-2003ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತು ಮಾಡಿ ಆದೇಶ ಜಾರಿ ಮಾಡಲಾಗಿತ್ತು.

ಉಲ್ಲೇಖದಲ್ಲಿ ನಮೂದಿಸಿದ ಪತ್ರ ದಿ:8-10-2003 ಮತ್ತು 14-10-2003 ರನ್ವಯ ಶ್ರೀಮತಿ ಶಾರದಾ ಚಂದ್ರಶೇಖರಯ್ಯಾ ಸರಗಣಾಚಾರ್ಯ ಪ್ರಾಥಮಿಕ ಶಾಲಾ ಶಿಕ್ಷಕಿ ಸರಕಾರಿ ಕನ್ನಡ ಗಂಡು ಮಕ್ಕಳ ಕಿರಿಯ ಪ್ರಾಥಮಿಕ ಶಾಲೆ ಬೆನಕೊಟಗಿ ತಾ:ಸಿಂದಗಿ ಇವರ ಮೇಲೆ ಕೆಳಗೆ ನಮೂದಿಸಿದಂತೆ ಆರೋಪ ಹೊರಿಸಿ ಕರ್ನಾಟಕ ಸಿವಿಲ್ ಸೇವಾ ನಿಯಮ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) 1957ರ ನಿಯಮಗಳ ಮೇರೆಗೆ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ ಇಲಾಖಾ ವಿಚಾರಣೆಯನ್ನು ದಿ:28-10-2003ರಂದು ನಿಗದಿಪಡಿಸಲಾಗಿತ್ತು.

ವಿಚಾರಣಾಧಿಕಾರಿಗಳು ಶ್ರೀಮತಿ ಶಾರದಾ ಚಂದ್ರಶೇಖರಯ್ಯ ಸರಗಣಾಚಾರ್ಯ ಅವರು ದಿ:28-10-2003ರಂದು ವಿಚಾರಣೆಗೆ ಹಾಜರಾಗದೇ ಗೈರು ಇದ್ದು ಇವರು ವಂಚನೆಯಿಂದ ಉದ್ದೇಶ ಪೂರ್ವಕವಾಗಿ ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿ ದುರ್ನಡತೆಯಿಂದ ಮೋಸದಿಂದ ಸರಕಾರಿ ನೌಕರಿ ಪಡೆದಿದ್ದು ದಾಖಲಾತಿಗಳಿಂದ ಸಾಬೀತಾಗುವುದರಿಂದ ಅವಶ್ಯಕ ಶಿಸ್ತು ಕ್ರಮ ಜರುಗಿಸುವಂತೆ ವರದಿ ಸಲ್ಲಿಸಿರುವರು.

ಶ್ರೀಮತಿ ಶಾರದಾ ಚಂದ್ರಶೇಖರಯ್ಯ ಸರಗಣಾಚಾರ್ಯ ಅವರು ದಿ:13-1-2003 ರಿಂದ ಜಾರಿಗೆ ಬರುವಂತೆ ದಿ:1-8-2003ರಂದು ಸ ಶಿ ಹುದ್ದೆಗೆ ಸ್ವಇಚ್ಛಾ ರಾಜೀನಾಮೆ ಪತ್ರ ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿಂದಗಿ ಅವರಿಗೆ ಸಲ್ಲಿಸಿರುವರು.

**ಆರೋಪ:**

1) ಶ್ರೀಮತಿ ಶಾರದಾ ಚಂದ್ರಶೇಖರಯ್ಯ ಸರಗಣಾಚಾರ್ಯ ಇವರು ಅಂಜುಮನ್ ಕಿರಿಯ ಕಾಲೇಜ್ ಸಿಂದಗಿಯಿಂದ 1984ರಲ್ಲಿ ಪಿಯುಸಿ ಪಾಸದ ಬಗ್ಗೆ ದಾಖಲೆ ಒದಗಿಸಿರುವರು ಆದರೆ ಸದರಿ ಕಾಲೇಜಿನಿಂದ 1984ನೇ ಸಾಲಿನಲ್ಲಿ ಯಾರು ಪರೀಕ್ಷೆಗೆ ಹಾಜರಾಗಿರುವುದಿಲ್ಲಾ ಅಂತಾ ಆ ಕಾಲೇಜಿನ ಪ್ರಾಚಾರ್ಯರು ವರದಿ ಮಾಡಿರುವರು.

ಆದ್ದರಿಂದ ಇವರು ಖೊಟ್ಟಿ ದಾಖಲೆ ಸೃಷ್ಟಿಸಿರುವುದು ಸಾಬೀತಾಗುತ್ತದೆ.

2) ಪಿಯುಸಿ ಪ್ರಮಾಣ ಪತ್ರದಲ್ಲಿ ನೊಂದಣಿ ನಂ:274130 ತಿಂಗಳು:ವರ್ಷ ಕಾಲಂನಲ್ಲಿ ಏಪ್ರಿಲ್ 94 ಇದ್ದದ್ದನ್ನು ಏಪ್ರಿಲ್ 84 ಅಂತಾ ಉದ್ದೇಶಪೂರ್ವಕವಾಗಿ ತಿದ್ದುಪಡಿ ಮಾಡಿ ಮೋಸ ಮಾಡಿರುವರು.

3) ಸದರಿ ಪಿಯುಸಿ ಪ್ರಮಾಣ ಪತ್ರದಲ್ಲಿ ಭಾಗ 2 ಪಾರ್ಟ್ 2ರಲ್ಲಿ ಇತಿಹಾಸ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ವಿಷಯಗಳಲ್ಲಿ ಕೊನೆಯ ಎರಡು ವಿಷಯಗಳನ್ನು ಶಿಕ್ಷಣ 1 ಮತ್ತು ಶಿಕ್ಷಣ 2 ಎಂದು ತಿದ್ದುಪಡಿ ಮಾಡಿ ಬೋಗಸ್ ದಸ್ತಾವೇಜುಗಳನ್ನು ನಿರ್ಮಿಸಿದ್ದು ಕಂಡು ಬಂದಿದೆ.

4) ಸದರಿ ಶ್ರೀಮತಿ:ಶಾರದಾ ಚಂದ್ರಶೇಖರಯ್ಯ ಸರಗಣಾಚಾರ್ಯ ಅವರು ಮೂಲ ದಾಖಲೆಗಳನ್ನು ಹಾಜರುಪಡಿಸುವಂತೆ ತಿಳಿಸಿದಾಗ್ಯೂ ಅವುಗಳನ್ನು ಬಿ ಇ ಓ ಸಿಂದಗಿ ಅವರಿಂದ ಮರಳಿ ಪಡೆದಿಲ್ಲಾ ಅಂತಾ ಸುಳ್ಳು ಹೇಳಿಕೆ ನೀಡಿರುವರು ಯಾಕೆಂದರೆ ದಿ:6-7-96 ರಂದು ಎಲ್ಲಾ ಶೈಕ್ಷಣಿಕ ದಾಖಲಾತಿಗಳನ್ನು ಸದರಿಯವರು ಬಿ ಇ ಓ ಸಿಂದಗಿ ಅವರಿಂದ ಪಡೆದು ಸ್ವೀಕೃತಿ ನೀಡಿ ರುಜು ಮಾಡಿರುವರು.

5) ಸದರಿಯವರ ಜನ್ಮದಿನಾಂಕ 1-6-1965 ಇದ್ದು (ಎಸ್‌ಎಸ್‌ಎಲ್‌ಸಿ ಯಲ್ಲಿ ನಮೂದಿಸಿದಂತೆ) ಆದರೆ ಸೇವಾ ಪುಸ್ತಕದಲ್ಲಿ 01-06-1968 ಅಂತಾ ತಿದ್ದುಪಡಿ ಮಾಡಿರುವರು.

ಶ್ರೀಮತಿ ಶಾರದಾ ಚಂದ್ರಶೇಖರಯ್ಯ ಸರಗಣಾಚಾರ್ಯ ಅವರು ಪ್ರಾಥಮಿಕ ಶಾಲಾ ಸಹ ಶಿಕ್ಷಕ ಹುದ್ದೆಗೆ ನೇಮಕಾತಿ ಹೊಂದಲು ಶೈಕ್ಷಣಿಕ ಅರ್ಹತೆ ಇರದಿದ್ದರೂ ಬೋಗಸ್ ದಾಖಲಾತಿಗಳನ್ನು ಶೈಕ್ಷಣಿಕ ಪ್ರಮಾಣ ಪತ್ರಗಳ ನಕಲಿ ದಸ್ತಾವೇಜುಗಳನ್ನು ಉದ್ದೇಶ

ಪೂರ್ವಕವಾಗಿ ಸೃಷ್ಟಿಸಿ ಸರಕಾರಿ ನಿಯಮಗಳನ್ವಯ ನೈಜ ದಾಖಲಾತಿಗಳನ್ನು ಒದಗಿಸದೇ ಮೋಸದಿಂದ ದುರ್ನಡತೆಯಿಂದ ಉದ್ದೇಶಪೂರ್ವಕವಾಗಿ ಖೊಟ್ಟಿ ದಾಖಲಾತಿ ನೀಡಿ ನೇಮಕ ಹೊಂದಿರುವುದು ಸಾಬೀತಾಗಿರುವುದರಿಂದ ಮತ್ತು ಈ ರೀತಿ ಅನ್ಯಾಯ ಮಾಡಿದ ಕಾರಣ ನೈಜ ಅರ್ಹತೆ ಹೊಂದಿದ ಅಭ್ಯರ್ಥಿಯ ನೇಮಕಾತಿಯಿಂದ ವಂಚಿತವಾಗಬೇಕಾಯಿತು ಆದ್ದರಿಂದ.

**ಆದೇಶ**

**ಸಂ:ಇ5:2704:ಸಿಸಿಎ:23:02-03:2003-04, ದಿನಾಂಕ: 20ನೇ ನವೆಂಬರ್ 2003**

ಶ್ರೀಮತಿ ಶಾರದಾ ಚಂದ್ರಶೇಖರಯ್ಯ ಸರಗಣಾಚಾರ್ಯ ಪ್ರಾಥಮಿಕ ಶಾಲಾ ಶಿಕ್ಷಕಿ ಸರಕಾರಿ ಗಂಡು ಮಕ್ಕಳ ಕಿರಿಯ ಪ್ರಾಥಮಿಕ ಶಾಲೆ ಬೆನಕೊಟಗಿ ಎಲ್‌ಟಿ ತಾ:ಸಿಂದಗಿ ಅವರು ಖೊಟ್ಟಿ ದಾಸ್ತಾವೇಜುಗಳನ್ನು ಉದ್ದೇಶಪೂರ್ವಕವಾಗಿ ಸೃಷ್ಟಿಸಿ ಮೋಸದಿಂದ ದುರ್ನಡತೆಯಿಂದ ಸರ್ಕಾರಿ ಕೆಲಸಕ್ಕೆ ನೇಮಕಗೊಂಡಿರುವುದು ಸಾಬೀತಾಗಿರುವುದರಿಂದ ಹಾಗೂ ವಿಚಾರಣಾ ಪ್ರಾಧಿಕಾರ ಅವರ ವರದಿಯಂತೆ ಇವರು ಸ್ವಇಚ್ಛೆಯಿಂದ ನೀಡಿದ ರಾಜೀನಾಮೆಯನ್ನು ಒಪ್ಪಿದೇ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ನಿಯಮ 8(8)ರನ್ವಯ ಮುಂದಿನ ನಿಯೋಜನೆಗೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ದಿ:13-1-2003 ರಿಂದ ಜಾರಿಗೆ ಬರುವಂತೆ ಪ್ರಾಥಮಿಕ ಶಾಲಾ ಶಿಕ್ಷಕ ಹುದ್ದೆಯಿಂದ ವಜಾ ಮಾಡಲಾಗಿದೆ ಮತ್ತು ಸದರಿಯವರು ಈಗಾಗಲೇ ಪಡೆದ ವೇತನ ಭತ್ಯೆ ಇತ್ಯಾದಿ ಹಣವನ್ನು ಸರ್ಕಾರಕ್ಕೆ ಮರು ಪಾವತಿ ಮಾಡುವಂತೆ ಆದೇಶಿಸಿದೆ.

ಶಿಸ್ತು ಪ್ರಾಧಿಕಾರ ಹಾಗೂ ಉಪನಿರ್ದೇಶಕರು,
ಪಿ.ಆರ್. 65 ಸಾರ್ವಜನಿಕ ಶಿಕ್ಷಣ ಇಲಾಖೆ, ವಿಜಾಪುರ.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ: ಡಿಸಿಎಂ:ನ:ಎಲ್‌ಜಿಎಸ್:ಸಿಆರ್-17:03-04 ದಿನಾಂಕ: 3ನೇ ಜನವರಿ 2004**

**ವಿಷಯ:** 2003-04ನೇ ಸಾಲಿಗೆ ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ಭತ್ಯೆ ನೀಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ. ಸಕಇ 184 ಬಿಎಂಎಸ್ 99, ದಿನಾಂಕ:8-8-1999.
2. ಈ ಕಛೇರಿಯ ಇದೇ ಸಮಸಂಖ್ಯೆಯ ಪ್ರಕಟಣೆಯ ದಿನಾಂಕ:8-7-2003.

ಉಲ್ಲೇಖದಲ್ಲಿನ ಸರ್ಕಾರದ ಆದೇಶದನುಸಾರವಾಗಿ ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಸಿಖ್, ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ನ್ಯಾಯಾಂಗ ಸೇವೆಯಲ್ಲಿ ತರಬೇತಿ ಪಡೆಯಲು ಈ ಕೆಳಕಂಡ ನಿಬಂಧನೆಗೊಳಪಟ್ಟಂತೆ ಅರ್ಜಿಗಳನ್ನು 2003-04ನೇ ಸಾಲಿಗೆ ಉಲ್ಲೇಖ (2)ರಲ್ಲಿ ಅರ್ಜಿ ಆಹ್ವಾನಿಸಲಾಗಿತ್ತು. ಆದರೆ, ಸದರಿ ಪ್ರಕಟಣೆಗೆ ಅಲ್ಪಸಂಖ್ಯಾತರ ಕಾನೂನು ಪದವೀಧರರಿಂದ ತರಬೇತಿ ಭತ್ಯೆ ಕೋರಿ ಸಾಕಷ್ಟು ಅರ್ಜಿಗಳು ಬಾರದ ಪ್ರಯುಕ್ತ ಮತ್ತೊಮ್ಮೆ ಪ್ರಕಟಣೆ ನೀಡಲಾಗಿದೆ. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆದು ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:15-1-2004 ರೊಳಗೆ ಈ ಕಛೇರಿಗೆ ಸಲ್ಲಿಸುವುದು.

**ನಿಬಂಧನೆಗಳು**

(1) ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಗೆ ಸಂಬಂಧಿಸಿದಂತೆ, ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರಾಗಿರುತ್ತಾರೆ.

(2) ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು, ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದವರಾಗಿರಬೇಕು.

(3) ಅಭ್ಯರ್ಥಿಯ ವಾರ್ಷಿಕ ಆದಾಯವು ರೂ.15,000ಕ್ಕೆ ಮೀರಿರಬಾರದು. ಪ್ರವರ್ಗ-1ರಡಿ ಬರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

(4) ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ.2. ಒಬ್ಬ ಅಭ್ಯರ್ಥಿಯನ್ನು ಮುಸ್ಲಿಂ ಹಾಗೂ ಇನ್ನೊಬ್ಬ ಅಭ್ಯರ್ಥಿಯನ್ನು ಇತರೆ ಅಲ್ಪಸಂಖ್ಯಾತರ ಸಮುದಾಯಗಳಿಂದ ಆಯ್ಕೆ ಮಾಡಲಾಗುವುದು.

(5) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

(6) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳ ವಯೋಮಿತಿಯಲ್ಲಿರಬೇಕು.

(7) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

(8) ಅರ್ಜಿಯ ಜೊತೆಯಲ್ಲಿ ಅವಶ್ಯ ಮಾಹಿತಿಗಳಾದ, ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಅಂಕ ಪಟ್ಟಿಗಳ ದೃಢೀಕರಣ ಪ್ರತಿ, ಜನ್ಮದಿನಾಂಕ ದೃಢೀಕರಿಸಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಮತ್ತು ವರ್ಗಾವಣೆ ಪ್ರಮಾಣಪತ್ರ ದೃಢೀಕರಣ ಪ್ರತಿಯನ್ನು ಸಲ್ಲಿಸಬೇಕು.

(9) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಭತ್ಯೆನೀಡಲಾಗುವುದು ಮತ್ತು ಮಾಹೆಯಾನ ರೂ.1000ಗಳ ತರಬೇತಿ ಭತ್ಯೆ ನೀಡಲಾಗುವುದು.

(10) ಅಭ್ಯರ್ಥಿಯು ತರಬೇತಿಯನ್ನು ಮಧ್ಯದಲ್ಲಿ ಬಿಡುವಂತಿಲ್ಲ. ಈ ಬಗ್ಗೆ ಒಂದು ಮುಚ್ಚಳಿಕೆ ಪತ್ರ ನೀಡಬೇಕು. ಒಂದು ವೇಳೆ ಸರ್ಕಾರಿ ಉದ್ಯೋಗ ದೊರೆತಲ್ಲಿ ಅಥವಾ ನ್ಯಾಯಾಧಿಕಾರಿಯೂ ನೇಮಕಾತಿ ಹೊಂದಿದಲ್ಲಿ ಜಿಲ್ಲಾ ಸಮಿತಿಯ ಗಮನಕ್ಕೆ ತಂದು ತರಬೇತಿ ಬಿಡಬಹುದು. ವಿಶೇಷ ಸಂದರ್ಭದಲ್ಲಿ ತರಬೇತಿ ಬಿಡಬೇಕಾದಲ್ಲಿ ಸರ್ಕಾರದ ಅನುಮತಿ ಪಡೆಯಬೇಕು.

(11) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

(12) ಹೆಚ್ಚಿನ ಮಾಹಿತಿಗಾಗಿ ಅಭ್ಯರ್ಥಿಗಳು, ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ ಗೋಪುರ, ಅಂಬೇಡ್ಕರ್ ವೀಧಿ, ಬೆಂಗಳೂರು-1, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯತಕ್ಕದ್ದು.

ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮತ್ತು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರಿಗೆ ಸಲ್ಲಿಸುವುದು. ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 66

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-54/2003**

**Applicants:**

1. Shabanaa Bee W/o Ayyub
   Age 23 Years Occ: House hold
   R/o Ujalam Tq Basavakalyan Dist
   Biadar & 4 others.

**V/s**

**Respondents:**

1. Imam Sab S/o Mahboob Attar Owner vehicle No KA 39/271 R/o Ujalam Tq Basavakalyan Dist Bidar
2. D.M. National Insurance Co.Ltd., Gulbarga

**PROCLAMATION**

Sri/Smt. Shabana Bee W/o. Ayyub R/o Ujalam Tq Basavakalyan Dist Bidar have/has filed application in this court claiming compensation stating that Late Ayyub was working as Driver Under the Respondent No I he met with an accident arising out of and during the course of employment as a result he died on 4.8.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this Proclamation. If no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

P.R. 68

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು** : ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು** : ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ

**ಆರೋಪಿಗಳು** : ಯಾರು ಪತ್ತೆಯಾಗಿರುವುದಿಲ್ಲ.

**ಬಾಧ್ಯತೆದಾರರು** : 1) ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿ:19.6.2003ರಂದು ಹೊಸನಗರ ವಲಯದ ಕಸಬಾ ಶಾಖೆಯ ಅರಣ್ಯ ಪಾಲಕರು ಮತ್ತು ಸಿಬ್ಬಂದಿ ವರ್ಗದವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ದುಮ್ಮ ಗ್ರಾಮದ ಸ.ನಂ. 16ರ ಸರ್ಕಾರಿ ಅರಣ್ಯ ಪ್ರದೇಶದಲ್ಲಿ ಕಾಯುತ್ತಿರುವಾಗ ಮಧ್ಯಾಹ್ನ 2.10ರ ಸಮಯದಲ್ಲಿ ಒಂದು ವಾಹನ ಬಜಾಜ್ ಸ್ಕೂಟರ್ ದುಮ್ಮ ಸ.ನಂ. 16ರ ಕಡೆಯ ರಸ್ತೆಯ ಮಾರ್ಗದಿಂದ ಕಾಳಿಕಾಪುರ ಸುಮಾರು 100 ಅಡಿ ದೂರದಲ್ಲಿ ಇಲಾಖೆಯವರನ್ನು ಕಂಡ ಕೂಡಲೇ ಅಸಾಮಿಗಳು ಸ್ಕೂಟರನ್ನು ರಸ್ತೆಯಲ್ಲಿ ಬೀಳಿಸಿ ಓಡಿ ಪರಾರಿಯಾದರು. ನಂತರ ಪರಿಶೀಲಿಸಿದಾಗ ಬಜಾಜ್ ಸ್ಕೂಟರ್ ಸಿಎಚ-5498, ಛಾಸ್ಸಿ ನಂಬರ್ ಕಾಣಿಸುತ್ತಿಲ್ಲ. ಇಂಜಿನ್ ನಂ. 10 ಇ-020938 ಆಗಿದ್ದು, ವಾಹನದ ಬಾಕ್ಸ್‌ನಲ್ಲಿ ಶ್ರೀಗಂಧದ 4 ತುಂಡುಗಳಿದ್ದು, ಅವುಗಳ ತೂಕ 10 ಕೆ.ಜಿ. ಇದ್ದು, ಈ ಶ್ರೀಗಂಧಕ್ಕೆ ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಶ್ರೀಗಂಧ 10 ಕೆ.ಜಿಯನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ), ರಿಂದ (ಜಿ), 86, 87,84, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅ.ಮೊ. ಸಂ. 29/03-04 ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 9.10.2003ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿ: 18.10.2003ರಂದು ವನಕೃಪ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಅಮೊ. ವಾಹನ. 10/2003-04, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತಿ ಮಾಡಿದ ವಾಹನ ಬಜಾಜ್ ಸ್ಕೂಟರ್ ಸಿಎಒ-5498, ಛಾಸ್ಸಿ ನಂಬರ್ ಕಾಣಿಸುತ್ತಿಲ್ಲ. ಇಂಜಿನ್ ನಂ. 10 ಇ-020938 ಆಗಿದ್ದು, ವಾಹನದ ಬಾಕ್ಸ್‌ನಲ್ಲಿ ಶ್ರೀಗಂಧದ 4 ತುಂಡುಗಳಿದ್ದು, ಅವುಗಳ ತೂಕ 10 ಕೆ.ಜಿ ಇದ್ದು, ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:23-12-2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 69

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

| | | |
|---|---|---|
| **ಉಪಸ್ಥಿತರು** | : | ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದಿದಾರರು** | : | ವಲಯ ಅರಣ್ಯಾಧಿಕಾರಿ, ಸಾಗರ ವಲಯ |
| **ಆರೋಪಿಗಳು** | : | (1) ಭಾಷಾ (2) ಅನ್ವರ್ |
| **ಬಾಧ್ಯತೆದಾರರು** | : | 1) ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿ:6.9.2003ರಂದು ವಲಯ ಅರಣ್ಯಾಧಿಕಾರಿ, ಸಾಗರ ಮತ್ತು ಸಿಬ್ಬಂದಿ ವರ್ಗದವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಕಸಬಾ ಹೋಬಳಿ ಬೇಳೂರು ಗ್ರಾಮದ ಸರ್ಕಾರಿ ಅರಣ್ಯ ಪ್ರದೇಶದಲ್ಲಿ ಕಾಯುತ್ತಿರುವಾಗ ಇಬ್ಬರು ಆಸಾಮಿಗಳು ಒಂದು ಎಂ-80 ಕೆಎ-15-ಇ-2475ರಲ್ಲಿ ಬರುತ್ತಿರುವುದನ್ನು ತನಿಖೆಗೆ ನಿಲ್ಲಿಸಿ 1) ಭಾಷಾ (2) ಅನ್ವರ್ ಇಬ್ಬರನ್ನು ವಿಚಾರಿಸಲಾಗಿ ಸರ್ಕಾರಿ ಪ್ರದೇಶದಲ್ಲಿ ತೆಗೆದ ಹಾಲುಮಡ್ಡಿ 5 ಕೆ.ಜಿ. 350 ಗ್ರಾಂ ಇದ್ದು, ಇದಕ್ಕೆ ಪರವಾನಿಗೆ ಕೇಳಲಾಗಿ ಇಲ್ಲವೆಂದು ತಿಳಿಸಿದ್ದು, ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಹಾಲುಮಡ್ಡಿಯನ್ನು ಜಪ್ತಿ ಮಾಡಿ ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ), 33, 62 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅ.ಮೊ. ಸಂ. 57/03-04ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 9.10.2003ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿ: 18.10.2003ರಂದು ವನಕೃಪ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ

ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಅಮೊ. ವಾಹನ. 13/2003-04, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತಿ ಮಾಡಿದ ವಾಹನ ಎಂ-80 ಕೆಎ-15-ಇ-2475ರಲ್ಲಿ ಹಾಲುಮಡ್ಡಿ 5 ಕೆ.ಜಿ. 350 ಗ್ರಾಂ ಇದ್ದು, ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:23-12-2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 70

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

| | | |
|---|---|---|
| **ಉಪಸ್ಥಿತರು** | : | ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದಿದಾರರು** | : | ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ |
| **ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ. |
| **ಬಾಧ್ಯತೆದಾರರು** | : | 1) ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿ:30.08.2003ರಂದು ಆನವಟ್ಟಿ ವಲಯ ವನಪಾಲಕ ಮತ್ತು ಸಿಬ್ಬಂದಿಯವರು ಸೊರಬ ತಾಲ್ಲೂಕು ಕುಪ್ಪಗಡ್ಡೆ ಹೋಬಳಿ ತಾಳಗುಪ್ಪ ಗ್ರಾಮದ ಬಸ್ ನಿಲ್ದಾಣವನ್ನು ತಿರುಗುತ್ತಿದ್ದಾಗ ಬೆಳಿಗ್ಗೆ ಜಾವ 5-00 ಗಂಟೆಗೆ ಪುಟ್ನಳ್ಳಿ ಕಡೆಯಿಂದ ಜಡೆ ಕಡೆಗೆ PWD ರಸ್ತೆಯಲ್ಲಿ ಒಂದು ವಾಹನ ಬರುತ್ತಿರುವುದನ್ನು ತನಿಖೆ ಸಲ್ಲಿಸಲು ಸೂಚಿಸಿದಾಗ ವಾಹನ ಅಲ್ಲಿ ಬಿಳಿಸಿ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ ಯಮಹಾ ಬೈಕ್ ನಂಬರ್ ಇಲ್ಲ ಛಾಸ್ಸಿ ನಂಬರ್ 984145, 209687 ಇಂಜಿನ್ ನಂ. 145209687ನಲ್ಲಿ ಒಂದು ಚೀಲದಲ್ಲಿ ಶ್ರೀಗಂಧದ ಬೇರು, ಬುಡ ಇದ್ದು ಈ ಶ್ರೀಗಂಧಕ್ಕೆ ಯಾವುದೇ ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಶ್ರೀಗಂಧ ಜಪ್ತಿ ಮಾಡಿ ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963, 87(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1963ರ 84ರಂತೆ ಆನವಟ್ಟಿ ವಲಯದ ಅ.ಮೊ. ಸಂಖ್ಯೆ 90/03-04ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ವಾಹನವನ್ನು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 9.10.2003ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿ: 18.10.2003ರಂದು ವನಕೃಪ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಅಮೊ. ವಾಹನ. 14/2003-04, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಜಪ್ತಿ ಮಾಡಿದ ವಾಹನ ಯಮಹಾ ಬೈಕ್ ನಂಬರ್ ಇಲ್ಲ ಚಾಸ್ಸಿ ನಂಬರ್ 984145, 209687 ಇಂಜಿನ್ ನಂ. 145209687ನಲ್ಲಿ ಒಂದು ಚೀಲದಲ್ಲಿ ಶ್ರೀಗಂಧದ ಬೇರು, ಬುಡ ಇದ್ದು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು

ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:23-12-2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 71

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು** : ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು** : ವಲಯ ಅರಣ್ಯಾಧಿಕಾರಿ, ಸಾಗರ ವಲಯ

**ಆರೋಪಿಗಳು** : ಸಿಕ್ಕಿರುವುದಿಲ್ಲ.

**ಬಾಧ್ಯತೆದಾರರು** : 1) ಯಾರು ಬಂದಿಲ್ಲ.

**ಪ್ರಸ್ತಾವನೆ:**

ದಿ:16.9.2003ರಂದು ಸಾಗರ ವಲಯದ ಆವಿನಹಳ್ಳಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆವಿನಹಳ್ಳಿ ಶಾಖೆಗೆ ಸೇರಿದ ಆವಿನಹಳ್ಳಿಯಿಂದ ಹುಲಿದೇವರಬನಕ್ಕೆ ಹೋಗುವ ಟಾರ್ ರಸ್ತೆಯ ಎಡಭಾಗದ ಗೋಡೆಕೊಪ್ಪ ಸರ್ಕಾರಿ ಅರಣ್ಯ ಪ್ರದೇಶದಲ್ಲಿ ಕಾಯುತ್ತಿರುವಾಗ ರಾತ್ರಿ 12-30ರ ಸಮಯದಲ್ಲಿ ಸಾಗರದಿಂದ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಸಿಬ್ಬಂದಿಯನ್ನು ಕಂಡು ವಾಹನ ನಿಲ್ಲಿಸದೆ ವೇಗವಾಗಿ ಚಲಿಸಿದಾಗ ಅದನ್ನು ಬೆನ್ನಟ್ಟಿ ಮೇಲ್ಕಂಡ ಸ್ಥಳದಲ್ಲಿ ವಾಹನ ಬಿಟ್ಟು ಆರೋಪಿಗಳು ಕತ್ತಲಲ್ಲಿ ಪರಾರಿಯಾಗಿರುತ್ತಾರೆ. ವಾಹನ ಸುಜುಕಿ ಮ್ಯಾಕ್ಸ್-100-ಕೆಎ-15-ಹೆಚ್-4522, ಛಾಸ್ಸಿ ನಂಬರ್ 1901ಎಫ್220028, ಇಂಜಿನ್ ನಂಬರ್ 1901-ಎಂ-2680, ಚಾಲಕನ ಹಿಂಭಾಗದ ಸೀಟಿನಲ್ಲಿ ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧ 10.5 ಕೆ.ಜಿ. ಇದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಚಾಪಾವಾಗಲೀ ಸಾಗಿಸಲು ರಹದಾರಿಯಾಗಲೀ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಶ್ರೀಗಂಧವನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ), 62, 87, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅ.ಮೊ. ಸಂ. 62/03-04 ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 9.10.2003ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿ: 18.10.2003ರಂದು ವನಕ್ರಪ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಅಮೊ. ವಾಹನ. 15/2003-04, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತಿ ಮಾಡಿದ ವಾಹನ ಸುಜುಕಿ ಮ್ಯಾಕ್ಸ್-100-ಕೆಎ-15-ಹೆಚ್-4522, ಛಾಸ್ಸಿ ನಂಬರ್ 1901 ಎಫ್220028, ಇಂಜಿನ್ ನಂ. 1901-ಎಂ-2680 ವಾಹನ ಹಿಂಭಾಗದ ಸೀಟಿನಲ್ಲಿ ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧ 10.5 ಕೆ.ಜಿ. ಇದ್ದು, ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:23-12-2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 72

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು** : ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು** : ವಲಯ ಅರಣ್ಯಾಧಿಕಾರಿ, ಕಾರ್ಗಲ್ ವಲಯ

**ಆರೋಪಿಗಳು** : ಸಿಕ್ಕಿರುವುದಿಲ್ಲ.

**ಬಾಧ್ಯತೆದಾರರು** : 1) ಯಾರು ಬಂದಿಲ್ಲ.

**ಪ್ರಸ್ತಾವನೆ:**

ದಿ:17.9.2003ರಂದು ಕಾರ್ಗಲ್ ವಲಯದ ತುಮರಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು ಕರೂರು ಹೋಬಳಿ ಶಂಕಣ್ಣಶ್ಯಾನುಭೋಗ್ ಗ್ರಾಮ ಹೊಸಕೊಪ್ಪ ಸುಳ್ಳಳ್ಳಿ ರಸ್ತೆಯಲ್ಲಿ 5 ಕಿ.ಮಿ. ಕಲ್ಲಿನ ಹತ್ತಿರ ಕಾಯುತ್ತಿರುವಾಗ ರಾತ್ರಿ ಸುಮಾರು 11-00 ಗಂಟೆಯ ಸಮಯದಲ್ಲಿ ಒಂದು ವಾಹನ ಹೊಸಕೊಪ್ಪ ಕಡೆಯಿಂದ ಬರುತ್ತಿರುವುದನ್ನು ನೋಡಿ ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರನ್ನು ಕಂಡು ಸ್ವಲ್ಪ ದೂರ ಹಿಂದೆ ಬೈಕನ್ನು ಬಿಟ್ಟು 2 ಜನ ಅಸಾಮಿಗಳು ಕಾಡಿನಲ್ಲಿ ಓಡಿ ಪರಾರಿಯಾದರು. ನಂತರ ವಾಹನವನ್ನು ಪರಿಶೀಲಿಸಲಾಗಿ ಯಮಹಾ ಬೈಕ್ ಕೆಎ-15-ಹೆಚ್-9026, ಚಾಸ್ಸಿ ನಂಬರ್ ಕೆಎ-15-3393, ಇಂಜಿನ್ ನಂಬರ್ 5-ಕೆಎ-153393 ಆಗಿದ್ದು, ಈ ವಾಹನದಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ 9 ಕೆ.ಜಿ. 750 ಗ್ರಾಂ ಶ್ರೀಗಂಧ ಇದ್ದು, ಇಲಾಖಾ ಛಾಪಾವಿರಲಿಲ್ಲ ಮತ್ತು ಯಾವುದೇ ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಮಹಜರು ಕ್ರಮ ಜರುಗಿಸಿ ವಾಹನ ಮತ್ತು ಶ್ರೀಗಂಧವನ್ನು ಜಪ್ತಿ ಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ), 62, 84, 86, 87, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅ.ಮೊ. ಸಂ. 11/2003-04 ದಿ: 18.9.2003ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 9.10.2003ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿ: 18.10.2003ರಂದು ವನಕೃಪ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಅಮೊ. ವಾಹನ. 17/2003-04, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತಿ ಮಾಡಿದ ವಾಹನ ಯಮಹಾ ಬೈಕ್ ಕೆಎ-15-ಹೆಚ್-9026, ಛಾಸ್ಸಿ ನಂಬರ್ ಕೆಎ-15-3393, ಇಂಜಿನ್ ನಂ. 5-ಕೆಎ-153393 ಆಗಿದ್ದು, ಈ ವಾಹನದಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ 9 ಕೆ.ಜಿ. 750 ಗ್ರಾಂ ಶ್ರೀಗಂಧ ಇದ್ದು, ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:23-12-2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 73

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು** : ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು** : ವಲಯ ಅರಣ್ಯಾಧಿಕಾರಿ, ಸೊರಬ ವಲಯ

**ಆರೋಪಿಗಳು** : ಸಿಕ್ಕಿರುವುದಿಲ್ಲ.

**ಬಾಧ್ಯತೆದಾರರು** : 1) ಯಾರು ಬಂದಿಲ್ಲ.

| 1 | 2 | 3 | 4 |
|---|---|---|---|
| 246. | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಕೃಷಿ ಅಭಿವೃದ್ಧಿ ಕೇಂದ್ರ, ದಡೇಸುಗೂರು, ರಾಯಚೂರು ಜಿಲ್ಲೆ. | ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಭಿವೃದ್ಧಿ ಕೇಂದ್ರ, ದಡೇಸುಗೂರು, ರಾಯಚೂರು ಜಿಲ್ಲೆ. | ಜಂಟಿ ಕೃಷಿ ನಿರ್ದೇಶಕರು, ರಾಯಚೂರು ಜಿಲ್ಲೆ. |
| 247. | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀಜ ಪರೀಕ್ಷಾ ಕೇಂದ್ರ, ಹೆಬ್ಬಾಳ, ಬೆಂಗಳೂರು -24. | ಸಹಾಯಕ ಕೃಷಿ ನಿರ್ದೇಶಕರು, ಬೀಜ ಪರೀಕ್ಷಾ ಕೇಂದ್ರ, ಹೆಬ್ಬಾಳ, ಬೆಂಗಳೂರು-24. | ಕೃಷಿ ನಿರ್ದೇಶಕರು, ಬೆಂಗಳೂರು. |
| 248. | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀಜ ಪರೀಕ್ಷಾ ಕೇಂದ್ರ, ಧಾರವಾಡ. | ಸಹಾಯಕ ಕೃಷಿ ನಿರ್ದೇಶಕರು, ಬೀಜ ಪರೀಕ್ಷಾ ಕೇಂದ್ರ, ಧಾರವಾಡ. | ಜಂಟಿ ಕೃಷಿ ನಿರ್ದೇಶಕರು, ಧಾರವಾಡ. |
| 249. | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀಜ ಪರೀಕ್ಷಾ ಕೇಂದ್ರ, ದಾವಣಗೆರೆ. | ಸಹಾಯಕ ಕೃಷಿ ನಿರ್ದೇಶಕರು, ಬೀಜ ಪರೀಕ್ಷಾ ಕೇಂದ್ರ, ದಾವಣಗೆರೆ. | ಜಂಟಿ ಕೃಷಿ ನಿರ್ದೇಶಕರು, ದಾವಣಗೆರೆ. |
| 250. | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀಜ ಪರೀಕ್ಷಾ ಕೇಂದ್ರ, ಗಂಗಾವತಿ. | ಸಹಾಯಕ ಕೃಷಿ ನಿರ್ದೇಶಕರು, ಬೀಜ ಪರೀಕ್ಷಾ ಕೇಂದ್ರ, ಗಂಗಾವತಿ. | ಜಂಟಿ ಕೃಷಿ ನಿರ್ದೇಶಕರು, ಕೊಪ್ಪಳ. |
| 251. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಕಂಟ್ರೋಲ್ ಲ್ಯಾಬ್/ ಪ್ಯಾರಾಸೈಟ್ ಲ್ಯಾಬ್, ಮಂಡ್ಯ ಜಿಲ್ಲೆ. | ಕೃಷಿ ಅಧಿಕಾರಿ, ಬಯೋ ಕಂಟ್ರೋಲ್ ಲ್ಯಾಬ್ / ಪ್ಯಾರಾಸೈಟ್ ಲ್ಯಾಬ್, ಮಂಡ್ಯ ಜಿಲ್ಲೆ. | ಜಂಟಿ ಕೃಷಿ ನಿರ್ದೇಶಕರು, ಮಂಡ್ಯ ಜಿಲ್ಲೆ. |
| 252. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಕಂಟ್ರೋಲ್ ಲ್ಯಾಬ್/ ಪ್ಯಾರಾಸೈಟ್ ಲ್ಯಾಬ್, ಗಂಗಾವತಿ ತಾ. | ಕೃಷಿ ಅಧಿಕಾರಿ, ಬಯೋ ಕಂಟ್ರೋಲ್ ಲ್ಯಾಬ್ / ಪ್ಯಾರಾಸೈಟ್ ಲ್ಯಾಬ್, ಗಂಗಾವತಿ ತಾ. | ಜಂಟಿ ಕೃಷಿ ನಿರ್ದೇಶಕರು, ಕೊಪ್ಪಳ ಜಿಲ್ಲೆ. |
| 253. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಕಂಟ್ರೋಲ್ ಲ್ಯಾಬ್ / ಪ್ಯಾರಾಸೈಟ್ ಲ್ಯಾಬ್, ಬೈಲಹೊಂಗಲ ತಾಲ್ಲೂಕು. | ಕೃಷಿ ಅಧಿಕಾರಿ, ಬಯೋ ಕಂಟ್ರೋಲ್ ಲ್ಯಾಬ್ / ಪ್ಯಾರಾಸೈಟ್ ಲ್ಯಾಬ್, ಬೈಲಹೊಂಗಲ ತಾಲ್ಲೂಕು. | ಜಂಟಿ ಕೃಷಿ ನಿರ್ದೇಶಕರು, ಬೆಳಗಾಂ ಜಿಲ್ಲೆ. |
| 254. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಕಂಟ್ರೋಲ್ ಲ್ಯಾಬ್ / ಪ್ಯಾರಾಸೈಟ್ ಲ್ಯಾಬ್, ಗುಲ್ಬರ್ಗಾ ತಾ. | ಕೃಷಿ ಅಧಿಕಾರಿ, ಬಯೋ ಕಂಟ್ರೋಲ್ ಲ್ಯಾಬ್ / ಪ್ಯಾರಾಸೈಟ್ ಲ್ಯಾಬ್, ಗುಲ್ಬರ್ಗಾ ತಾ. | ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ ಜಿಲ್ಲೆ. |
| 255. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಫರ್ಟಿಲೈಸರ್ ಲ್ಯಾಬ್, ಹೆಬ್ಬಾಳ, ಬೆಂಗಳೂರು. | ಕೃಷಿ ಅಧಿಕಾರಿ, ಬಯೋ ಫರ್ಟಿಲೈಸರ್ ಲ್ಯಾಬ್, ಹೆಬ್ಬಾಳ, ಬೆಂಗಳೂರು | ಕೃಷಿ ನಿರ್ದೇಶಕರು, ಬೆಂಗಳೂರು. |
| 256. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಫರ್ಟಿಲೈಸರ್ ಲ್ಯಾಬ್, ಧಾರವಾಡ. | ಕೃಷಿ ಅಧಿಕಾರಿ, ಬಯೋ ಫರ್ಟಿಲೈಸರ್ ಲ್ಯಾಬ್, ಧಾರವಾಡ. | ಜಂಟಿ ಕೃಷಿ ನಿರ್ದೇಶಕರು, ಧಾರವಾಡ. |
| 257. | ಕೃಷಿ ಅಧಿಕಾರಿಗಳ ಕಛೇರಿ, ಬಯೋ ಫರ್ಟಿಲೈಸರ್ ಲ್ಯಾಬ್, ಗುಲ್ಬರ್ಗಾ. | ಕೃಷಿ ಅಧಿಕಾರಿ, ಬಯೋ ಫರ್ಟಿಲೈಸರ್ ಲ್ಯಾಬ್, ಗುಲ್ಬರ್ಗಾ. | ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ. |
| 258. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಬೆಂಗಳೂರು. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಬೆಂಗಳೂರು. | ಕೃಷಿ ನಿರ್ದೇಶಕರು, ಬೆಂಗಳೂರು. |
| 259. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಕೋಲಾರ | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಕೋಲಾರ. | ಜಂಟಿ ಕೃಷಿ ನಿರ್ದೇಶಕರು, ಕೋಲಾರ ಜಿಲ್ಲೆ. |
| 260. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ತುಮಕೂರು. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ತುಮಕೂರು. | ಜಂಟಿ ಕೃಷಿ ನಿರ್ದೇಶಕರು, ತುಮಕೂರು ಜಿಲ್ಲೆ. |
| 261. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಶಿವಮೊಗ್ಗ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಶಿವಮೊಗ್ಗ. | ಜಂಟಿ ಕೃಷಿ ನಿರ್ದೇಶಕರು, ಶಿವಮೊಗ್ಗ ಜಿಲ್ಲೆ. |
| 262. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ದಾವಣಗೆರೆ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ದಾವಣಗೆರೆ. | ಜಂಟಿ ಕೃಷಿ ನಿರ್ದೇಶಕರು, ದಾವಣಗೆರೆ ಜಿಲ್ಲೆ. |

| 1 | 2 | 3 | 4 |
|---|---|---|---|
| 263. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ನಂಜನಗೂಡು, ಮೈಸೂರು ಜಿಲ್ಲೆ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ನಂಜನಗೂಡು, ಮೈಸೂರು ಜಿಲ್ಲೆ. | ಜಂಟಿ ಕೃಷಿ ನಿರ್ದೇಶಕರು, ಮೈಸೂರು ಜಿಲ್ಲೆ. |
| 264. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಮಂಡ್ಯ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಮಂಡ್ಯ. | ಜಂಟಿ ಕೃಷಿ ನಿರ್ದೇಶಕರು, ಮಂಡ್ಯ ಜಿಲ್ಲೆ. |
| 265. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಹಾಸನ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಹಾಸನ. | ಜಂಟಿ ಕೃಷಿ ನಿರ್ದೇಶಕರು, ಹಾಸನ ಜಿಲ್ಲೆ. |
| 266. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಚಿಕ್ಕಮಗಳೂರು. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಚಿಕ್ಕಮಗಳೂರು. | ಜಂಟಿ ಕೃಷಿ ನಿರ್ದೇಶಕರು, ಚಿಕ್ಕಮಗಳೂರು ಜಿಲ್ಲೆ. |
| 267. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಮಂಗಳೂರು, | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಮಂಗಳೂರು. | ಜಂಟಿ ಕೃಷಿ ನಿರ್ದೇಶಕರು, ಮಂಗಳೂರು ಜಿಲ್ಲೆ. |
| 268. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಸಿರಸಿ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಸಿರಸಿ. | ಜಂಟಿ ಕೃಷಿ ನಿರ್ದೇಶಕರು, ಉತ್ತರ ಕನ್ನಡ ಜಿಲ್ಲೆ. |
| 269. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಗದಗ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಗದಗ. | ಜಂಟಿ ಕೃಷಿ ನಿರ್ದೇಶಕರು, ಗದಗ ಜಿಲ್ಲೆ. |
| 270. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಗುಲ್ಬರ್ಗಾ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಗುಲ್ಬರ್ಗಾ. | ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ ಜಿಲ್ಲೆ. |
| 271. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಭಾಲ್ಕಿ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಭಾಲ್ಕಿ. | ಜಂಟಿ ಕೃಷಿ ನಿರ್ದೇಶಕರು, ಬೀದರ್ ಜಿಲ್ಲೆ. |
| 272. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ರಾಯಚೂರು. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ,ರಾಯಚೂರು. | ಜಂಟಿ ಕೃಷಿ ನಿರ್ದೇಶಕರು, ರಾಯಚೂರು ಜಿಲ್ಲೆ. |
| 273. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಜಮಖಂಡಿ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಜಮಖಂಡಿ. | ಜಂಟಿ ಕೃಷಿ ನಿರ್ದೇಶಕರು, ಬಾಗಲಕೋಟೆ ಜಿಲ್ಲೆ. |
| 274. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಬಳ್ಳಾರಿ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಬಳ್ಳಾರಿ. | ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆ. |
| 275. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಗೋಕಾಕ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಗೋಕಾಕ. | ಜಂಟಿ ಕೃಷಿ ನಿರ್ದೇಶಕರು, ಬೆಳಗಾವಿ ಜಿಲ್ಲೆ. |
| 276. | ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಕೊಡಿಗೆ. | ಕೃಷಿ ಅಧಿಕಾರಿಗಳು, ಮಣ್ಣು ಆರೋಗ್ಯ ಕೇಂದ್ರ, ಕೊಡಿಗೆ. | ಜಂಟಿ ಕೃಷಿ ನಿರ್ದೇಶಕರು, ಕೊಡಗು ಜಿಲ್ಲೆ. |
| 277 ರಿಂದ 279 | ಕೃಷಿ ಅಧಿಕಾರಿಗಳ ಕಛೇರಿ, ಸಂಚಾರಿ ಮಣ್ಣು ಆರೋಗ್ಯ ಕೇಂದ್ರಗಳು, ಧಾರವಾಡ, ನಂಜನಗೂಡು, ಗುಲ್ಬರ್ಗಾ. | ಕೃಷಿ ಅಧಿಕಾರಿಗಳು. ಸಂಚಾರಿ ಮಣ್ಣು ಆರೋಗ್ಯ ಕೇಂದ್ರಗಳು, ಧಾರವಾಡ, ನಂಜನಗೂಡು, ಗುಲ್ಬರ್ಗಾ. | ಸಂಬಂಧಪಟ್ಟ ಜಿಲ್ಲಾ ಜಂಟಿ ಕೃಷಿ ನಿರ್ದೇಶಕರುಗಳು. |
| 280 | ಕೃಷಿ ಅಧಿಕಾರಿಗಳ ಕಛೇರಿ, ಬೀಜೋತ್ಪಾದನಾ ಕೇಂದ್ರಗಳು. | ಕೃಷಿ ಅಧಿಕಾರಿ, ಬೀಜೋತ್ಪಾದನಾ ಕೇಂದ್ರ | ಸಂಬಂಧಪಟ್ಟ ತಾಲ್ಲೂಕು ಸಹಾಯಕ ಕೃಷಿ ನಿರ್ದೇಶಕರು, |
| 281 | ಕೃಷಿ ಅಧಿಕಾರಿಗಳ ಕಛೇರಿ, ರೈತ ಸಂಪರ್ಕ ಕೇಂದ್ರಗಳು ಹೋಬಳಿ ಮಟ್ಟದಲ್ಲಿ. | ಕೃಷಿ ಅಧಿಕಾರಿ, ರೈತ ಸಂಪರ್ಕ ಕೇಂದ್ರ | ಸಂಬಂಧಪಟ್ಟ ತಾಲ್ಲೂಕು ಸಹಾಯಕ ಕೃಷಿ ನಿರ್ದೇಶಕರುಗಳು |

ಈ ಸಾರ್ವಜನಿಕ ಪ್ರಕಟಣೆ ತಕ್ಷಣದಿಂದ ಜಾರಿಗೆ ಬರುತ್ತದೆ. ಎಲ್ಲಾ ಜಿಲ್ಲಾ /ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಕಛೇರಿಯ ಸೂಚನಾ ಫಲಕದಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲು ಸೂಚಿಸಿದೆ.

**ಎಂ.ಅಬ್ದುಲ್ ಜಬ್ಬಾರ್**

**ಪಿ.ಆರ್. 82** ಜಂಟಿ ನಿರ್ದೇಶಕರು (ಆಡಳಿತ) ಕೃಷಿ ನಿರ್ದೇಶಕರ ಪರವಾಗಿ.

## ಸಹಕಾರ ಇಲಾಖೆ

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡುವಳಿಕೆಗಳು

**ವಿಷಯ:** ಸಮಾಪನಾ ಆದೇಶಿತ ಶಿರಾಳಕೊಪ್ಪ ನೌಕರರ ಗ್ರಾಹಕರ ಸಹಕಾರ ಸಂಘ ನಿಯಮಿತ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1. ಸ. ಸಂ. ಗಳ ಉಪ ನಿಬಂಧಕರು, ಶಿವಮೊಗ್ಗರವರ ಆದೇಶ ನಂ ಡಿಆರ್ಎಸ್/ ಕಾನೂನು/ 3/ ಎಲ್ಕ್ಯೂಡಿ/ 107/ 2001-02 ದಿನಾಂಕ: 30-5-2002.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರ ಪತ್ರ ನಂ ಎಆರ್ 25/ ಸಮಾಪನೆ/ 4621/ 03-04 ದಿನಾಂಕ: 30-12-2003.

**ಪ್ರಸ್ತಾವನೆ:**

ಶಿರಾಳಕೊಪ್ಪ ನೌಕರರ ಗ್ರಾಹಕರ ಸಹಕಾರ ಸಂಘ ನಿಯಮಿತ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕ್, ಈ ಸಂಘವು ಸಾಗರ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ಸಂಖ್ಯೆ ಎಆರ್ಎಸ್/ ನೊಂದಣಿ/ 245/74-75 ದಿನಾಂಕ: 14-3-1975 ರಲ್ಲಿ ನೊಂದಣಿಯಾಗಿರುತ್ತದೆ. ಈ ಸಂಘವು 97-98ನೇ ಸಾಲಿನಿಂದ ನಿಷ್ಕ್ರಿಯಗೊಂಡಿರುವ ಬಗ್ಗೆ ಸಾಗರ ಉಪ ವಿಭಾಗದ ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರರವರ ಪತ್ರ ನಂ. ಎಆರ್. 25/ ಸಮಾಪನೆ/ 2001-02 ದಿನಾಂಕ: 11-1-2002 ರಲ್ಲಿ ವರದಿ ಪ್ರಾಪ್ತವಾಗಿರುವುದರಿಂದ, ಉಲ್ಲೇಖ (1) ರಲ್ಲಿಯ ಆದೇಶದಲ್ಲಿ, ಈ ಸಂಘವನ್ನು ಸಮಾಪನೆಗೊಳಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಶಿಕಾರಿಪುರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು ಈ ಸಹಕಾರ ಸಂಘದ ಪ್ರಭಾರವನ್ನು ದಿನಾಂಕ: 25-09-2002 ರಂದು ವಹಿಸಿಕೊಂಡಿರುತ್ತಾರೆ. ಈ ಸಂಘದಲ್ಲಿಯ ಚರಾಸ್ತಿ ಮೌಲ್ಯ ರೂ: 1339/- ಗಳ ವಿಲೇವಾರಿಗಾಗಿ ಈ ಕಛೇರಿಯ ಆದೇಶ ನಂಬರ್ ಡಿಆರ್ಎಸ್/ ಕಾನೂನು/ 3/ ಡಿಎಲ್ಎಸ್/76/ 2002-03 ದಿನಾಂಕ: 1-2-2003ರಲ್ಲಿ ಅನುಮತಿ ನೀಡಿದ್ದು ಅದರಂತೆ ಸಮಾಪನಾಧಿಕಾರಿಯವರು ಚರಾಸ್ತಿ ವಿಲೇವಾರಿ ಮಾಡಿದ್ದು ಹರಾಜಿನಿಂದ ರೂ: 2025/- ಜಮಾ ಆಗಿದೆ ಎಂದು ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಷೇರು ಹಾಗೂ ಸಾಲ ಯಾವುದೂ ಇರುವುದಿಲ್ಲ. ಸಮಾಪನಾಧಿಕಾರಿಯವರು ಸದಸ್ಯರಿಗೆ ಷೇರು ವಾಪಸ್ಸು ಕೊಡುವ ಬಗ್ಗೆ ಸ್ಥಳೀಯ ದಿನ ಪತ್ರಿಕೆಯಲ್ಲಿ ಸದಸ್ಯರ ಗಮನಕ್ಕೆ ಪ್ರಚಾರಗೊಳಿಸಿ ರೂ: 2550/- ಷೇರು ಹಣವನ್ನು ಸದಸ್ಯರಿಗೆ ವಾಪಸ್ಸು ಕೊಟ್ಟು ಓಚರ್‌ಗಳನ್ನು ಹಾಜರ್ ಪಡಿಸಿರುತ್ತಾರೆ. ಈ ಸಂಘದ ಹೆಸರಿನಲ್ಲಿ ಡಿಸಿಸಿ ಬ್ಯಾಂಕ್ ನಿಯಮಿತ ಶಿರಾಳಕೊಪ್ಪ ಶಾಖೆಯಲ್ಲಿ ರೂ: 12,853/- ಇದ್ದು, ನಗದು ಶಿಲ್ಕು ರೂ: 200/- ಮಾತ್ರ ಇರುತ್ತದೆ. ಈ ರೀತಿ ಆಸ್ತಿಯಲ್ಲಿರುವ ರೂ: 13,053/- ಗಳನ್ನು ಸಮಾಪನಾಧಿಕಾರಿಯವರ ಭತ್ಯ ರೂ: 4170/- ಗಳ ಅನುಮತಿಗಾಗಿ ಮತ್ತು ಉಳಿದ ಮೊಬಲಗು ರೂ: 8883/- ಗಳನ್ನು ಶಿವಮೊಗ್ಗ ಡಿಸಿಸಿ ಬ್ಯಾಂಕ್‌ನ ವಿಸ್ತರಣಾ ಶಾಖೆಯಲ್ಲಿರುವ ಸಹಕಾರ ಅಭಿವೃದ್ಧಿ ಟ್ರಸ್ಟಿನ ಉಳಿತಾಯ ಖಾತೆ ನಂ: 8103 ಗೆ ವರ್ಗಾಯಿಸಲು ಕೋರಿರುತ್ತಾರೆ. ಈ ರೀತಿಯಿಂದ ಆಸ್ತಿ ಜವಾಬ್ದಾರಿ ಏನೂ ಇಲ್ಲದಂತಾಗಿ ನೊಂದಣಿ ರದ್ದತಿಗೆ ಕೋರಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಮತ್ತು ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರ ರವರ ಶಿಫಾರಸ್ ಆಧಾರದ ಮೇಲೆ ಈ ಸಂಘದ ಅಸ್ತಿತ್ವದಿಂದ ಯಾವುದೇ ಪ್ರಯೋಜನವಿಲ್ಲ ಎಂದು ದೃಢಪಟ್ಟಿದ್ದು, ಈ ಸಂಘದ ನೊಂದಣಿ ಸಂಖ್ಯೆಯನ್ನು ರದ್ದು ಗೊಳಿಸುವುದು ಸೂಕ್ತ ಎಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಆದೇಶ

### ನಂ. ಡಿಆರ್ಎಸ್/ ಕಾನೂನು/ ಎಲ್ಕ್ಯೂಡಿ/ 76/2002-03, ದಿನಾಂಕ: 31ನೇ ಡಿಸೆಂಬರ್ 2003

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/ 69/ ಸಿಎಲ್ಎಂ/ 2001 ದಿನಾಂಕ: 21-11-2001 ರಲ್ಲಿಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಶಿರಾಳಕೊಪ್ಪ ನೌಕರರ ಗ್ರಾಹಕರ ಸಹಕಾರ ಸಂಘ ನಿಯಮಿತ ಶಿರಾಳಕೊಪ್ಪ ಶಿಕಾರಿಪುರ ತಾಲ್ಲೂಕ್, ಇದರ ನೊಂದಣಿ ಸಂಖ್ಯೆ: ಎಆರ್ಎಸ್/ ನೊಂದಣಿ/ 245/74-75 ದಿನಾಂಕ: 14-3-1975 ಇದನ್ನು ರದ್ದು ಪಡಿಸಿ ಆದೇಶಿಸಿರುತ್ತೇನೆ.

ಶಿವಮೊಗ್ಗ ಡಿಸಿಸಿ ಬ್ಯಾಂಕ್ ನಿಯಮಿತ, ಶಿರಾಳಕೊಪ್ಪ ಶಾಖೆ, ಶಿರಾಳಕೊಪ್ಪದಲ್ಲಿ ಈ ಸಂಘದ ಹೆಸರಿನಲ್ಲಿರುವ ಉಳಿತಾಯ ಖಾತೆರಲ್ಲಿಯ ರೂ: 12,853/- ಮತ್ತು ಸಮಾಪನಾಧಿಕಾರಿಯವರ ಹಸ್ತೆ ಇರುವ ನಗದು ಶಿಲ್ಕು ರೂ: 200/- ರಲ್ಲಿ ಸಮಾಪನಾಧಿಕಾರಿ ಭತ್ಯ ರೂ: 4170/- ಪಡೆದ ನಂತರ ಉಳಿದ ರೂ: 8883/- ಗಳನ್ನು ಶಿವಮೊಗ್ಗ ಡಿಸಿಸಿ ಬ್ಯಾಂಕ್ ವಿಸ್ತರಣಾ ಶಾಖೆಯಲ್ಲಿರುವ ಸಹಕಾರ ಅಭಿವೃದ್ಧಿ ಟ್ರಸ್ಟ್‌ನ ಉಳಿತಾಯ ಖಾತೆ ನಂಬರ್ 8103 ಗೆ ವರ್ಗಾಯಿಸಲು ಷರತ್‌ವಿಧಿಸಲಾಗಿದೆ. ಈ ಪ್ರಕ್ರಿಯೆಯನ್ನು ಪೂರ್ಣಗೊಳಿಸುವ ಜವಾಬ್ದಾರಿ ಸಮಾಪನಾಧಿಕಾರಿಯವರದ್ದಾಗಿದೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವದಲ್ಲಿಲ್ಲವೆಂದು, ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ 31-12-2003 ರಂದು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ನೀಡಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 90 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಸಹಕಾರ ಇಲಾಖೆ

### ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡುವಳಿಕೆಗಳು

**ವಿಷಯ:** ಸಮಾಪನಾ ಆದೇಶಿತ ಖಜಾನೆ ನೌಕರರ ಮತ್ತು ಇತರೆ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1. ಸ. ಸಂ. ಗಳ ಉಪ ನಿಬಂಧಕರು, ಶಿವಮೊಗ್ಗರವರ ಆದೇಶ ನಂ ಡಿಆರ್‌ಎಸ್/ ಕಾನೂನು/ 3/ ಎಲ್‌ಕ್ಯೂಡಿ/ 23/ 03.04 ದಿನಾಂಕ: 30-9-2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗರವರ ಪತ್ರ ನಂ ಎಆರ್ 24/ ಸಮಾಪನೆ/ 1421/ 03.04 ದಿನಾಂಕ: 31-12-2003.

**ಪ್ರಸ್ತಾವನೆ:**

ಖಜಾನೆ ನೌಕರರ ಮತ್ತು ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಈ ಸಂಘವು ಶಿವಮೊಗ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ಸಂಖ್ಯೆ ಎಆರ್ 24/ ನೊಂದಣಿ/ ಆರ್‌ಎಸ್‌ಆರ್/46/ 23526/ 97-98 ದಿನಾಂಕ: 2-8-1997 ರಲ್ಲಿ ನೊಂದಣಿಯಾಗಿರುತ್ತದೆ. ಈ ಸಂಘವು ನಿಷ್ಕ್ರಿಯಗೊಂಡಿರುವ ಬಗ್ಗೆ ಶಿವಮೊಗ್ಗ ಉಪ ವಿಭಾಗದ ಸ.ಸಂ.ಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಪತ್ರ ನಂ. ಎಆರ್. 24/ ಸಮಾಪನೆ/ ಸಿಆರ್.72/ 2003-04 ದಿನಾಂಕ: 26-8-2003 ರಲ್ಲಿ ವರದಿ ಪ್ರಾಪ್ತವಾಗಿರುವುದರಿಂದ, ಉಲ್ಲೇಖ (1) ರಲ್ಲಿಯ ಆದೇಶದಲ್ಲಿ, ಈ ಸಂಘವನ್ನು ಸಮಾಪನೆಗೊಳಿಸಿದ್ದು, ವಿಕ್ರಯಾಧಿಕಾರಿ, 1ನೇ ವೃತ್ತ, ಸ.ಸಂ.ಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು ಈ ಸಹಕಾರ ಸಂಘದ ಪ್ರಭಾರವನ್ನು ದಿನಾಂಕ: 6-11-2003 ರಂದು ವಹಿಸಿಕೊಂಡಿರುತ್ತಾರೆ. ಈ ಸಂಘದ ಪ್ರಭಾರ ವಹಿಸಿ ಕೊಡುವ ಪೂರ್ವದಲ್ಲಿ ಆಸ್ತಿ ಜವಾಬ್ದಾರಿ ಏನೂ ಇಲ್ಲದಂತೆ ಮಾಡಿ, ಪ್ರಭಾರ ವಹಿಸಿ ಕೊಂಡಿರುವುದಾಗಿ ತಿಳಿಸಿರುತ್ತಾರೆ. ಉಲ್ಲೇಖ (2)ರಲ್ಲಿಯ ಪತ್ರದಲ್ಲಿ ಶಿವಮೊಗ್ಗ ಉಪ ವಿಭಾಗದ ಸ.ಸಂ.ಗಳ ಸಹಾಯಕ ನಿಬಂಧಕರು, ಈ ಸಂಘದಲ್ಲಿ ಎಲ್ಲಾ ಸದಸ್ಯರಿಗೆ ಷೇರು ವಾಪಸ್ಸು ಕೊಡಲಾಗಿದ್ದು, ಸಂಗ್ರಹಿಸಬೇಕಾದ ಆಸ್ತಿ ಮತ್ತು ವಿಲೆಗಾಗಿ ಜವಾಬ್ದಾರಿ ಯಾವುದೂ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಸಂಘದಲ್ಲಿ ಎಲ್ಲಾ ಸದಸ್ಯರಿಗೆ ಷೇರು ವಾಪಸ್ಸು ಕೊಟ್ಟಿರುವುದರಿಂದ, ಸಂಘವು ಅಸ್ತಿತ್ವವನ್ನು ಕಳೆದುಕೊಂಡಂತಾಗಿದೆ. ಸಮಾಪನಾಧಿಕಾರಿಯವರು ವರದಿಯಲ್ಲಿ ಸದಸ್ಯರಿಗೆ ಷೇರು ಮೊತ್ತದ ಚೆಕ್ ಕೊಟ್ಟಿರುವ ಮೊಬಲಗು ರೂ: 3514/- ಮಾತ್ರ ಚೆಕ್ ನಗದೀಕರಣವಾಗದೇ, ಡಿಸಿಸಿ ಬ್ಯಾಂಕ್‌ನಲ್ಲಿ ಉಳಿದಿರುವುದಾಗಿ ಮತ್ತು ನಗದು ಶಿಲ್ಕು ರೂ: 1110/- ಮಾತ್ರ ಇದ್ದು, ಹೀಗೆ ಒಟ್ಟು ರೂ: 4624/- ಗಳಲ್ಲಿ ರೂ: 518/- ಸಮಾಪನಾಧಿಕಾರಿ ಭತ್ಯ ಪಡೆಯಲು ಮತ್ತು ಇನ್ನುಳಿದ ಮೊಬಲಗು ರೂ: 4106/- ಗಳನ್ನು ಸಹಕಾರ ಅಭಿವೃದ್ಧಿ ಟ್ರಸ್ಟ್‌ಗೆ ವರ್ಗಾಯಿಸಲು ಅನುಮತಿಗಾಗಿ ಕೋರಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಮತ್ತು ಸ.ಸಂ.ಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ರವರ ಶಿಫಾರಸ್ ಆಧಾರದ ಮೇಲೆ ಈ ಸಂಘದ ಅಸ್ತಿತ್ವದಿಂದ ಯಾವುದೇ ಪ್ರಯೋಜನವಿಲ್ಲ ಎಂದು ದೃಢಪಟ್ಟಿದ್ದು, ಈ ಸಂಘದ ನೊಂದಣಿ ಸಂಖ್ಯೆಯನ್ನು ರದ್ದು ಗೊಳಿಸುವುದು ಸೂಕ್ತ ಎಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ. ಡಿಆರ್‌ಎಸ್/ ಕಾನೂನು/ ಎಲ್‌ಕ್ಯೂಡಿ/ 23/2002-03, ದಿನಾಂಕ: 31ನೇ ಡಿಸೆಂಬರ್ 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/ 69/ ಸಿಎಲ್‌ಎಂ/ 2001 ದಿನಾಂಕ: 21-11-2001 ರಲ್ಲಿಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಖಜಾನೆ ನೌಕರರ ಮತ್ತು ಇತರೆ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ ಇದರ ನೊಂದಣಿ ಸಂಖ್ಯೆ: ಎಆರ್ 24/ ನೊಂದಣಿ/ ಆರ್‌ಎಸ್‌ಆರ್/ 46/ 23526/ 97-98 ದಿನಾಂಕ: 2-8-1997 ಇದನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಶಿವಮೊಗ್ಗ ಡಿಸಿಸಿ ಬ್ಯಾಂಕ್ ನಿಯಮಿತ, ವಿಸ್ತರಣಾ ಶಾಖೆ, ಶಿವಮೊಗ್ಗದಲ್ಲಿ ಈ ಸಂಘದ ಹೆಸರಿನಲ್ಲಿರುವ ಉಳಿತಾಯ ಖಾತೆ ನಂಬರ್ 54 ರಲ್ಲಿಯ ರೂ: 3514/- ಮತ್ತು ಸಮಾಪನಾಧಿಕಾರಿಯವರ ಹಸ್ತೆ ಇರುವ ನಗದು ಶಿಲ್ಕು ರೂ: 1110/- ರಲ್ಲಿ ಸಮಾಪನಾಧಿಕಾರಿ ಭತ್ಯ ರೂ: 518/- ಪಡೆದ ನಂತರ ಉಳಿದ ರೂ: 592/- ಹೀಗೆ ಒಟ್ಟು ರೂ: 4106/- ಗಳನ್ನು ಶಿವಮೊಗ್ಗ ಡಿಸಿಸಿ ಬ್ಯಾಂಕ್ ವಿಸ್ತರಣಾ ಶಾಖೆಯಲ್ಲಿರುವ ಸಹಕಾರ ಅಭಿವೃದ್ಧಿ ಟ್ರಸ್ಟ್‌ನ ಉಳಿತಾಯ ಖಾತೆ ನಂಬರ್ 8103 ಗೆ ವರ್ಗಾಯಿಸಲು ಷರತ್ತುವಿಧಿಸಲಾಗಿದೆ.

ಸಮಾಪನಾಧಿಕಾರಿಯವರು ರೂ: 518/- ಗಳ ಪ್ರಭಾರ ಭತ್ಯ ಪಡೆಯಲು ಅನುಮತಿ ನೀಡಿದ್ದು, ಸಹಕಾರ ಅಭಿವೃದ್ಧಿ ಟ್ರಸ್ಟ್‌ಗೆ ರೂ: 4106/- ಗಳನ್ನು ವರ್ಗಾಯಿಸುವ ಜವಾಬ್ದಾರಿ ಸಮಾಪನಾಧಿಕಾರಿಯವರದ್ದಾಗಿದೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವದಲ್ಲಿಲ್ಲವೆಂದು, ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸ.ಸಂ.ಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ 31-12-2003 ರಂದು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ನೀಡಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 92 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ವಿಷಯ:** ನಿಷ್ಕ್ರಿಯಗೊಂಡ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಉಡುಗಣಿ-ಶಿಕಾರಿಪುರ ತಾಲ್ಲೂಕು ಇದರ ಸಮಾಪನೆ ಆದೇಶ.

**ಉಲ್ಲೇಖ:**
1. ಸ.ಸಂ.ಗಳ ಸಹಾಯಕ ನಿಬಂಧಕರು, ಸಾಗರ ಇವರ ಪತ್ರ ನಂ.ಸಸಂಸನಿ-25:ಸಮಾಪನೆ:2001-02: ದಿನಾಂಕ:30-11-2001.
2. ಈ ಕಛೇರಿಯ ನೋಟೀಸ್ ನಂ. ಡಿಎಸ್:ಕಾನೂನು-3:ಡಿಎಲ್‌ಎಸ್:94:2001-02: ದಿನಾಂಕ:19.1.2002.
3. ಅಧ್ಯಕ್ಷರು ಉಡುಗಣ ವ್ಯ.ಸೇ.ಸ. ಬ್ಯಾಂಕ್ ನಿ., ಇವರ ಪತ್ರ ದಿನಾಂಕ:8.2.2002.
4. ಈ ಕಛೇರಿಯ ನೋಟೀಸ್ ಸಂ. ಡಿಆರ್‌ಎಸ್:ಕಾನೂನು-3:ಡಿಎಲ್‌ಎಸ್:3:94:2001-02: ದಿನಾಂಕ: 23-7-2003.
5. ಸ.ಸಂ.ಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪತ್ರ ನಂ.ಜೆಆರ್‌ಬಿ: ಎಲ್‌ಕ್ಯೂಡಿ:21:ಎಲ್‌ಪಿಎನ್:2003-04:ದಿನಾಂಕ:28-7-2003.
6. ಅಧ್ಯಕ್ಷರು ಉಡುಗಣಿ ವ್ಯ.ಸೇ.ಸ.ಬ್ಯಾಂಕ್ ನಿ., ಇವರ ಪತ್ರ ದಿನಾಂಕ ಇಲ್ಲ ಸ್ವೀಕರಿಸಿದ್ದು ದಿನಾಂಕ: 25.8.2003.
7. ವ್ಯವಸ್ಥಾಪಕ ನಿರ್ದೇಶಕರು ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಶಿವಮೊಗ್ಗ ರವರ ಪತ್ರ ನಂ.ಯೋ ಮತ್ತು ಅ:3561:2003-04:ದಿ:2-12-2003.

ಉಲ್ಲೇಖ (1) ರಲ್ಲಿಯ ಪ್ರಸ್ತಾವನೆಯಲ್ಲಿ ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿಕಾರಿಪುರ ತಾಲ್ಲೂಕು ಉಡುಗಣ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಈ ಸಂಘವು ನಿಷ್ಕ್ರಿಯಗೊಂಡ ಪ್ರಯುಕ್ತ ಸಮಾಪನೆಗೊಳಿಸಲು ವರದಿ ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯ ಪ್ರಕಾರ ಈ ಸಂಘದ ಆರ್ಥಿಕ ಸ್ಥಿತಿಯು ತುಂಬಾ ದುಸ್ಥಿತಿಯಲ್ಲಿದ್ದು, ಸದಸ್ಯರಿಗೆ ಯಾವುದೇ ತರಹದ ಸಹಾಯವಾಗುತ್ತಿಲ್ಲ. ದಿನಾಂಕ:31-3-99ಕ್ಕೆ ಇದ್ದಂತೆ ರೂ.13.91 ಲಕ್ಷ ನಿವ್ವಳ ನಷ್ಟ ಅನುಭವಿಸುತ್ತಿದ್ದು, ವ್ಯಾಪಾರ ಅಭಿವೃದ್ಧಿ ಯೋಜನೆ ಅನ್ವಯ ಯಾವುದೇ ಕಾರ್ಯಕ್ರಮ ಹಮ್ಮಿಕೊಂಡಿರುವುದಿಲ್ಲ. ಈ ಬ್ಯಾಂಕ್ ಕಳೆದ 3 ವರ್ಷಗಳಿಂದ ಸದಸ್ಯರಿಗೆ ಹಂಚಿದ ಸಾಲದ ಪ್ರಮಾಣ ನಬಾರ್ಡ್ ಷರತ್ತುಗಳಿಗೆ ಅತೀ ಕಡಿಮೆ ಪ್ರಮಾಣದ್ದಾಗಿದೆ. ದಿನಾಂಕ:31-3-99ಕ್ಕೆ ಇದ್ದಂತೆ ರೂ.4.23 ಲಕ್ಷ ಸಾಲ ಸದಸ್ಯರಿಂದ ವಸೂಲಾಗಲು ಬಾಕಿಯಿದ್ದು ಪೂರ್ಣ ಸಾಲ ಸುಸ್ತಿಯಾಗಿರುತ್ತದೆ. ಆಡಳಿತ ಮಂಡಳಿಯ ಸದಸ್ಯರು ಸಂಘವನ್ನು ಅಭಿವೃದ್ಧಿ ಪಡಿಸಲು ಯಾವುದೇ ಕಾರ್ಯಕ್ರಮ ಹಾಕಿಕೊಳ್ಳಲು ಆಸಕ್ತರಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಕಛೇರಿಯ ಉಲ್ಲೇಖ (2)ರಲ್ಲಿಯ ನೋಟೀಸಿನಲ್ಲಿ ಆಡಳಿತ ಮಂಡಳಿಯ ಸದಸ್ಯರಿಗೆ ಕಾರಣ ಕೇಳಿ ವರದಿ ಕೇಳಿದ್ದು, ಈ ನೋಟೀಸನ್ನು ಸ್ವೀಕರಿಸಿ, ಬ್ಯಾಂಕಿನ ವ್ಯಾಪ್ತಿಯ ಗ್ರಾಮಗಳಲ್ಲಿ ಪ್ರಕೃತಿ ವಿಕೋಪದಿಂದ ಬೆಳೆ ಬಾರದೆ ವಸೂಲಿ ಕುಂಠಿತವಾಗಿದೆ. ಬಿ.ಡಿ.ಪಿ. ಯೋಜನೆ ಅಡಿ ಕಾರ್ಯಕ್ರಮ ಹಮ್ಮಿಕ್ಕೊಳ್ಳುತ್ತೇವೆ. ಆದಕಾರಣ ಸಮಾಪನೆ ಮಾಡಬಾರದೆಂದು ಆಡಳಿತ ಮಂಡಳಿ ಸದಸ್ಯರು ಉಲ್ಲೇಖ (3)ರಲ್ಲಿಯ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಬ್ಯಾಂಕಿನ ಆಡಳಿತ ಮಂಡಳಿಯವರು ಸಾಧಿಸಿದ ಪ್ರಗತಿ ವಿಮರ್ಶೆಗಾಗಿ ಮತ್ತೊಂದು ಅವಕಾಶ ಕಲ್ಪಿಸಿ, ಉಲ್ಲೇಖ (3)ರಲ್ಲಿ ನೋಟೀಸ್ ಕೊಟ್ಟು, ವರದಿ ಕೇಳಲಾಗಿದೆ. ಈ ಬ್ಯಾಂಕಿನ ಅಧ್ಯಕ್ಷರು ಉಲ್ಲೇಖ(4)ರ ಪತ್ರದಲ್ಲಿ, 2001-02ನೇ ಸಾಲಿನಲ್ಲಿ 11 ಜನ ಸದಸ್ಯರಿಗೆ ರೂ.51,000 ಅಲ್ಪಾವಧಿ ಸಾಲ ಹಂಚಿರುತ್ತೇವೆ. 2003ನೇ ಸಾಲಿನಲ್ಲಿ ದಿನಾಂಕ:30-6-2003ಕ್ಕೆ ಕೆ.ಸಿ.ಸಿ. ಸಾಲವನ್ನು ಹಂಚಿರುತ್ತೇವೆ ಹಾಗೂ ನಿಯಂತ್ರಿತ ವಸ್ತುಗಳ ಮಾರಾಟ 11.00 ಲಕ್ಷಗಳದ್ದಾಗಿದೆ ಎಂದು ಹೇಳಿ, ಸಮಾಪನೆಗೊಳಿಸಬಾರದೆಂದು ಕೋರಿರುತ್ತಾರೆ.

ಉಲ್ಲೇಖ (5)ರಲ್ಲಿಯ ಪತ್ರದಲ್ಲಿ ಬೆಂಗಳೂರು ವಿಭಾಗದ ಜಂಟಿ ನಿಬಂಧಕರು, ಬೆಂಗಳೂರು ಇವರು ಸಬಲತೆಗೊಳಿಸಲು ಯಾವುದೇ ಸಾಧ್ಯತೆ ಇಲ್ಲದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸಮಾಪನೆಗೊಳಿಸಲು ತೀವ್ರ ಕ್ರಮಕ್ಕಾಗಿ ತಿಳಿಸಿರುತ್ತಾರೆ.

ಈ ಬ್ಯಾಂಕಿನ ಸಮಾಪನೆ ಬಗ್ಗೆ ಹಣಕಾಸು ಸಂಸ್ಥೆಯಿಂದ ಡಿ.ಸಿ.ಸಿ. ಬ್ಯಾಂಕ್‌ನಿಂದ ವರದಿ ಕೇಳಲಾಗಿದ್ದು, ಉಲ್ಲೇಖ (7)ರಲ್ಲಿಯ ಪತ್ರದಲ್ಲಿ ಡಿ.ಸಿ.ಸಿ. ಬ್ಯಾಂಕ್, ಶಿವಮೊಗ್ಗ ಇದರ ವ್ಯವಸ್ಥಾಪಕ ನಿರ್ದೇಶಕರು ಪತ್ರ ಬರೆದು, ಈ ಬ್ಯಾಂಕ್ ರೂ.24.56 ಲಕ್ಷ ನಷ್ಟದಲ್ಲಿದ್ದು, ಪುನಃಶ್ಚೇತನಗೊಳಿಸುವ ಪರಿಸ್ಥಿತಿ ಇಲ್ಲದೇ ಇರುವುದರಿಂದ ಈ ಬ್ಯಾಂಕನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಈ ಬ್ಯಾಂಕಿಗೆ ಯಾವುದೇ ರೀತಿಯ ವಿಶೇಷ ಆರ್ಥಿಕ ನೆರವು ನೀಡಲು ಸಾಧ್ಯವಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಈ ಮೇಲ್ಕಂಡ ಕಾರಣಗಳಿಂದ ಮತ್ತು ಹಣಕಾಸು ಬ್ಯಾಂಕಿನ ಶಿಫಾರಸ್ಸಿನ ಆಧಾರದನ್ವಯ ಈ ಸಂಘವನ್ನು ಸಮಾಪನೆಗೊಳಿಸಲು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

### ಆದೇಶ

### ನಂ.ಡಿಆರ್‌ಎಸ್:ಡಿಎಲ್‌ಎಸ್:ಸಮಾಪನೆ:86:2003-04, ದಿನಾಂಕ: 27ನೇ ಡಿಸೆಂಬರ್ 2003

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ, ಕೆ. ಈಶ್ವರಸ್ವಾಮಿ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:243:ಸಿಎಲ್‌ಎಂ:91: ದಿನಾಂಕ:4-5-1994 ರ ಪ್ರಕಾರ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ, ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿ., ಉಡುಗಣೆ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಈ ಸಂಘವನ್ನು ಸಮಾಪನೆಗೆ ಆದೇಶಿಸಿದ್ದೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರ ಅನ್ವಯ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಶಿವಮೊಗ್ಗ ಇದರ ಶಿಕಾರಿಪುರ 2 ವೃತ್ತದ ಕ್ಷೇತ್ರಾಧಿಕಾರಿಯವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿದ್ದೇನೆ.

ಸಮಾಪನೆಗೊಂಡ ಈ ಸಂಘದ ಪೂರ್ಣ ಪ್ರಭಾರವನ್ನು ಸಮಾಪನಾಧಿಕಾರಿಯವರು ಕೂಡಲೇ ವಹಿಸಿಕೊಂಡು, 30 ದಿನಗಳೊಳಗಾಗಿ ವರದಿ ಮಾಡಲು ಸೂಚಿಸಿದೆ.

ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ:27ನೇ ಡಿಸೆಂಬರ್ 2003ರಂದು ಹೊರಡಿಸಿರುತ್ತೇನೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 93 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ

## ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-38:2003

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಶ್ರೀ ಚಿಕ್ಕಣ್ಣ, 45 ವರ್ಷ ಬಿನ್ ಲೇಟ್ ರಾಮಣ್ಣ ಕೆಂದಟ್ಟಿ ವಿಲೇಜ್, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ.

1. ಶ್ರೀಮತಿ ಆಶಾನಾಥವಾಜ್ ಕೋಂ ಲೇಟ್ ದೇನ್ನಿಸ್‌ವಾಜ್, ಕಾವಲಪಡು ವಿಲೇಜ್, ವಾಫ್ ಅಂಚೆ, ಬಂಟ್ವಾಳ ತಾ: ದಕ್ಷಿಣ ಕನ್ನಡ ಜಿಲ್ಲೆ.
2. ಮೆ: ಓರಿಯೆಂಟಲ್ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ವಿಭಾಗೀಯ ಕಛೇರಿ, ಲಿಯೋ ಶಾಪಿಂಗ್ ಕಾಂಪ್ಲೆಕ್ಸ್ ರೆಸಿಡೆನ್ಸಿ ರಸ್ತೆ, ಬೆಂಗಳೂರು-01.

### ಪ್ರಕಟಣೆ

ಅರ್ಜಿದಾರರಾದ ಶ್ರೀ ಚಿಕ್ಕಣ್ಣ ಬಿನ್ ರಾಮಣ್ಣ ಅವರು ತಮ್ಮ ಗಂಡ:ಮಗನಾದ ಶ್ರೀ ಬಸವರಾಜು ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಆಶಾನಾಥವಾಜ್‌ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 28-2-2000 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 31-12-2003 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 97 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ

## ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-37:2003

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಗುರಪ್ಪ ಬಿನ್ ಪೂಜಾರಿ ಗುರಪ್ಪ
2. ಶ್ರೀನಿವಾಸಪ್ಪ ಬಿನ್ ಗುರಪ್ಪ
3. ಶಿವಪ್ಪ ಬಿನ್ ಗುರಪ್ಪ
ನಾಗನಾಯಕನಹಳ್ಳಿ, ಗುಮರೆಡ್ಡಿಪುರ ಅಂಚೆ, ಹೊಳ್ಳೂರು ಹೋಬಳಿ, ಕೋಲಾರ ತಾ:

1. ಮೆಹಬೂಬ್ ಪಾಶ ಬಿನ್ ಶೇಖ್ ಹೈದರ್ ಮೆಲತ್‌ನಗರ, ಚಿಕ್ಕಬಳ್ಳಾಪುರ ರಸ್ತೆ, ಕೋಲಾರ.
2. ಮೆ: ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ಡಿವಿಷನಲ್ ಕಛೇರಿ, ಅಂಚೆ ಪೆಟ್ಟಿಗೆ ಸಂಖ್ಯೆ:30, ಎಂ.ಬಿ. ರಸ್ತೆ, ರಾಬರ್ಟ್ ಸನ್‌ಪೇಟೆ, ಕೆ.ಜಿ.ಎಫ್.

### ಪ್ರಕಟಣೆ

ಅರ್ಜಿದಾರರಾದ ಗುರಪ್ಪ ಬಿನ್ ಪೂಜಾರಿ ಗುರಪ್ಪ ಅವರು ತಮ್ಮ ಗಂಡ:ಮಗನಾದ ಶ್ರೀ ಶಂಕರಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಮೆಹಬೂಬ್ ಪಾಶರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 11-7-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 31-12-2003 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 98 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**
**ಪ್ರಕಟಣೆ ಸಂಖ್ಯೆ:ಕರಾಆ/ಆಡಳಿತ/02/2004 ದಿನಾಂಕ: 17ನೇ ಜನವರಿ 2004**

**ವಿಷಯ:** ಚಿಕ್ಕಮಗಳೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ಚಿಕ್ಕಮಗಳೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ)ರಡಿಯಲ್ಲಿ ಆಯ್ಕೆ ಮಾಡುವ ಸಲುವಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಚಿಕ್ಕಮಗಳೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಆಯ್ಕೆ ಬಯಸಿ ಅರ್ಜಿ ಸಲ್ಲಿಸುವುದಕ್ಕಿಂತ ಮುಂಚಿತವಾಗಿ ಗ್ರಾಹಕ ಸಂರಕ್ಷಣಾ ಕಾಯ್ದೆ 1986 ಮತ್ತು ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು 1988 ಇವುಗಳನ್ನು ಓದಿ ತಿಳಿದುಕೊಂಡು, ಪ್ರತಿ ತಿಂಗಳು ರೂ.3000-00 ಗೌರವಧನ ಮತ್ತು ರೂ.300-00 ಸಾರಿಗೆ ಭತ್ಯೆಯನ್ನು ಪಡೆಯಲು ಇಚ್ಛೆಯುಳ್ಳವವು ಈ ಕೆಳಕಂಡ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ 16ನೇ ಫೆಬ್ರವರಿ 2004ರಂದು ಸಂಜೆ 5-00 ಗಂಟೆಯೊಳಗೆ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರಿಗೆ ಸಲ್ಲಿಸತಕ್ಕದ್ದು.

**ಸದಸ್ಯರಾಗಿ ಆಯ್ಕೆಯಾಗಲು ಇರಬೇಕಾದ ಅರ್ಹತೆಗಳು:-**

1) ಅರ್ಜಿ ಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸಾಗಿರಬೇಕು.

2) ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.

3) ಪ್ರಾಮಾಣಿಕತೆ, ದಕ್ಷತೆ ಹಾಗೂ ನಿಷ್ಠೆ ಇರುವುದರ ಜೊತೆಗೆ ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ ಲೆಕ್ಕಪತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ 10 ವರ್ಷಗಳ ಅನುಭವವುಳ್ಳವರಾಗಿರಬೇಕು.

4) ನಿಗದಿತ ಅರ್ಜಿ ನಮೂನೆಗಳ ಪ್ರತಿಯನ್ನು ಯಾವುದೇ ಶುಲ್ಕವಿಲ್ಲದಂತೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇಲ್ಲಿ ಖುದ್ದಾಗಿ ಹಾಜರಾಗಿ ಪಡೆಯುವುದರ ಮೂಲಕ ಸ್ವೀಕರಿಸಬಹುದು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಹೆಚ್.ಆರ್. ಶ್ರೀನಿವಾಸ್**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ಸದಸ್ಯರ ನೇಮಕಾತಿಗೆ ಅರ್ಜಿ
(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ
ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ
ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ........................................ (ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರು ಬದಲಾಯಿಸಿ ಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| 3. | **ವಿಳಾಸಗಳು:** | |
| ಅ. | ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ) | (ಅ) |

| | |
|---|---|
| ಆ. ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರ ಅಥವಾ ಯಾವುದೇ ವೃತ್ತಿಯಲ್ಲಿದ್ದೀರ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಆ) |
| 4. ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ-ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | <br>(ಅ)<br>(ಆ)<br>(ಇ) |
| 5. ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. (ಅ) ಜನ್ಮ ಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| 7. (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

8. ಎಸ್.ಎಸ್.ಎಲ್.ಸಿ.ಯಿಂದ ಮೊದಲ್ಗೊಂಡು ವಿದ್ಯಾರ್ಹತೆ - ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು).

| ಶಾಲೆ/ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ಪದವಿಯ ಹೆಸರು |
|---|---|---|---|
| | | | |

9. ನೀವು ಯಾವಾಗಲಾದರು ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಚೇರಿ/ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | |
|---|---|
| 10. ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | |

| | | | |
|---|---|---|---|
| 11. | (ಅ) | ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ? | (ಅ) |
| | (ಆ) | ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ? | (ಆ) |
| | (ಇ) | ಮೇಲಿನ (ಅ) ಅಥವಾ/ಮತ್ತು (ಆ)ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಇ) |
| 12. | (ಅ) | ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ತೆಗೆದು ಹಾಕಲಾಗಿದೆಯೇ (removed)/ಹೊರ ಹಾಕಲಾಗಿದೆಯೇ (terminated)/ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred) | (ಅ) |
| | (ಆ) | ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ? | | |
| | 1) | ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ. | |
| | 2) | ಹುದ್ದೆಗೆ ಬೇಕಾದ ವಿದ್ಯಾರ್ಹತೆ/ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/16ನ್ನು ನೋಡಿ). | |

| | |
|---|---|
| 14. ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. ಅರ್ಜಿದಾರನ ಈಗಿನ ವಾರ್ಷಿಕ ವರಮಾನ-ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ. | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

______________________________ ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/*ರಾಜ್ಯ ಆಯೋಗದ *ಅಧ್ಯಕ್ಷ/*ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/*ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/*ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು ______________________ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/*ಸದಸ್ಯನಾಗಿ ಕಾರ್ಯನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:

ದಿನಾಂಕ: ಅರ್ಜಿದಾರರ ಸಹಿ

**ಸಹಬಂಧ**

**ಚಾರಿತ್ರ್ಯ ಪ್ರಮಾಣ ಪತ್ರ**

ಶ್ರೀ ______________________________, ಇವರ ಮಗನಾದ/ಮಗಳಾದ/ಹೆಂಡತಿಯಾದ ಶ್ರೀ/ಶ್ರೀಮತಿ ______________________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ ______________ ವರ್ಷ ಮತ್ತು ______________ ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ಶ್ರೀಮತಿ ______________________________, (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ:

ದಿನಾಂಕ:

ಪಿ.ಆರ್. 118

ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು ಕಚೇರಿ/ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಚೇರಿಯ ದೂರವಾಣಿ ಸಂಖ್ಯೆ.

**ಶ್ರೀ ಬಸವಂತರಾಯ ಪಾಟೀಲ ವಿಚಾರಣಾ ಆಯೋಗ, ವಿಜಾಪೂರ**

**ಪ್ರಕಟಣೆ ಸಂಖ್ಯೆ: 1 ಬಿಪಿಸಿ:ಐಎನ್‌ಕ್ಯೂ:01:2004 ದಿನಾಂಕ: 14ನೇ ಜನವರಿ 2004**

**ಕರ್ನಾಟಕ ಸರಕಾರ ಅಧಿಸೂಚನೆ ಎಚ್‌ಡಿ:33:ಪಿಸಿಇ:2002 ದಿನಾಂಕ:1ನೇ ಅಕ್ಟೋಬರ್ 2003**

**ವಿಷಯ:** ವಿಜಾಪೂರ ಜಿಲ್ಲೆ ಇಂಡಿ ತಾಲ್ಲೂಕು, ಝಳಕಿ ಗ್ರಾಮದಲ್ಲಿ ದಿನಾಂಕ:4-7-2002 ರಂದು ನಡೆದ ಪೊಲೀಸ್ ಗೋಲಿಬಾರ್‌ನಲ್ಲಿ 4 ಜನರು ಸಾವಿಗೀಡಾದ ಪ್ರಕರಣವನ್ನು ನ್ಯಾಯಾಂಗ ತನಿಖೆ ನಡೆಸುವ ಕುರಿತು.

ಅಧಿಸೂಚನೆ ಕ್ರಮಾಂಕ: ಎಚ್‌ಡಿ:33:ಪಿಸಿಇ:2002 ದಿನಾಂಕ:1ನೇ ಅಕ್ಟೋಬರ್ 2003ರ ಮೇರೆಗೆ ಕರ್ನಾಟಕ ಸರಕಾರವು ವಿಚಾರಣಾ ಆಯೋಗದ ಅಧಿನಿಯಮ 1952 3ನೇ ಕಲಮಿನ ಪ್ರಕಾರ ವಿಜಾಪೂರ ಜಿಲ್ಲೆಯ ಇಂಡಿ ತಾಲ್ಲೂಕು ಝಳಕಿ ಗ್ರಾಮದಲ್ಲಿ ದಿನಾಂಕ: 4-7-2002 ರಂದು ನಡೆದ ಪೊಲೀಸ್ ಗೋಲಿಬಾರ್‌ನಲ್ಲಿ 4 ಜನರು ಸಾವಿಗೀಡಾದ ಘಟನೆ ಕುರಿತು ಕೆಳಗೆ ನಮೂದಿಸಿದ ವಿಷಯದ ಬಗ್ಗೆ ವಿಚಾರಣೆ ನಡೆಸಿ ವರದಿ ನೀಡಲು ಶ್ರೀ ಬಸವಂತರಾಯ ಪಾಟೀಲ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ವಿಜಾಪೂರ ಇವರನ್ನು ವಿಚಾರಣಾ ಆಯೋಗ ನಿಯಮಿಸಲ್ಪಟ್ಟಿದೆ.

**ವಿಷಯ**

"ದಿನಾಂಕ: 4-7-2002ರಂದು ವಿಜಾಪೂರ ಜಿಲ್ಲೆಯ ಇಂಡಿ ತಾಲ್ಲೂಕಿನ ಝಳಕಿ ಗ್ರಾಮದಲ್ಲಿ ನಡೆದ ಪೊಲೀಸ್ ಗೋಲಿಬಾರ್‌ನಲ್ಲಿ 4 ಜನರು ಸಾವಿಗೀಡಾಗಿದ್ದು ಸದರಿ ಪರಿಸ್ಥಿತಿಯ ನಿರ್ವಹಣೆಯಲ್ಲಿ ಜಿಲ್ಲೆಯ ಆಡಳಿತ ವರ್ಗ, ಪೊಲೀಸ್ ಇಲಾಖೆಯವರು ನಿರ್ಲಕ್ಷ್ಯ ಅಥವಾ ತಪ್ಪು ನಿರ್ಣಯವೆಸಗಿದ್ದಾರೆಯೇ?"

ಆದುದರಿಂದ ವಿಚಾರಣಾ ಆಯೋಗದ ಅಧಿನಿಯಮದಂತೆ ಹಾಗೂ ಸದರಿ ಅಧಿನಿಯಮಗಳ ಆಧಾರಿತ ನಿಬಂಧನೆಗಳ ಮೂಲಕ ಪ್ರಾಪ್ತವಾದ ಅಧಿಕಾರದಿಂದ ಈ ಮೂಲಕ ಆಯೋಗವು ಎಲ್ಲಾ ಸಾರ್ವಜನಿಕರಿಗೆ ಮತ್ತು ಅಧಿಕೃತ ಸಂಘ ಸಂಸ್ಥೆಗಳಿಗೆ ತಿಳಿಸುವುದೇನೆಂದರೆ- ಮೇಲ್ಕಂಡ ಅಧಿಸೂಚನೆಯಲ್ಲಿ ನಮೂದಿಸಿದ ವಿಷಯಗಳ ಬಗ್ಗೆ ಮಾಹಿತಿಯುಳ್ಳವರು ತಮಗೆ ತಿಳಿದ ವಿಷಯಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು 4 ಪ್ರತಿಗಳಲ್ಲಿ ಆಯೋಗಕ್ಕೆ ಒಪ್ಪಿಸಬೇಕು. ಲಿಖಿತ ಹೇಳಿಕೆಯು ಇಂಗ್ಲೀಷ್ ಅಥವಾ ಕನ್ನಡದಲ್ಲಿದ್ದು ಎಲ್ಲಾ ವಿಷಯಗಳನ್ನು ಪ್ರತ್ಯೇಕ ಪ್ಯಾರಾದಲ್ಲಿ ವಿಂಗಡಿಸಿ ಬರೆದಿರಬೇಕು.

ಈ ಆಯೋಗಕ್ಕೆ ಒದಗಿಸಿದ ಪ್ರತಿ ಹೇಳಿಕೆಯ ಜೊತೆಗೆ ತಮ್ಮ ಹೇಳಿಕೆಯನ್ನು ಸಮರ್ಥಿಸಿ ಸಂಬಂಧಪಟ್ಟವರು ಒಂದು ಪ್ರಮಾಣ ಪತ್ರವನ್ನು ಸಾದರಪಡಿಸಬೇಕು. ಸದರಿ ಪ್ರಮಾಣ ಪತ್ರವು ಪ್ರಮಾಣ ವಚನ ಸ್ವೀಕರಿಸುವ ಅಧಿಕಾರವುಳ್ಳವರಿಂದ ದೃಢೀಕರಿಸಲ್ಪಟ್ಟಿರಬೇಕು. ಸದರಿ ಹೇಳಿಕೆ-ಪ್ರಮಾಣ ಪತ್ರವು ಇಂಗ್ಲೀಷ್ ಅಥವಾ ಕನ್ನಡ ಭಾಷೆಯಲ್ಲಿ ಇಲ್ಲದೇ ಇದ್ದ ಪಕ್ಷದಲ್ಲಿ, ಆ ಹೇಳಿಕೆ ಪ್ರಮಾಣ ಪತ್ರದ ಒಂದು ಯಥಾ ನಕಲನ್ನು ಇಂಗ್ಲಿಷ್ ಅಥವಾ ಕನ್ನಡ ಭಾಷೆಯಲ್ಲಿ ಸಾದರಪಡಿಸಬೇಕು.

ಹೇಳಿಕೆ ಪ್ರಮಾಣ ಪತ್ರವನ್ನು ಕೊಡತಕ್ಕ ವ್ಯಕ್ತಿ ತನ್ನ ಸರಿಯಾದ ಅಂಚೆ ವಿಳಾಸವನ್ನು ಹೇಳಿಕೆಯಲ್ಲಿ ನಮೂದಿಸತಕ್ಕದ್ದು.

ಹೇಳಿಕೆ ಕೊಡುವ ಪ್ರತಿಯೊಬ್ಬ ವ್ಯಕ್ತಿಯು ತಾನು ಯಾವುದಾದರೂ ದಾಖಲೆಗಳನ್ನು ಅವಲಂಬಿಸಿದ್ದಾರೆ ಅವುಗಳ ಮೂಲ ಪ್ರತಿಯನ್ನಾಗಲೀ ಅಥವಾ ನಕಲುಗಳನ್ನಾಗಲೀ ಸೂಕ್ತ ವಿವರಣೆಯೊಂದಿಗೆ ಆಯೋಗಕ್ಕೆ ಸಲ್ಲಿಸಬೇಕು ಮತ್ತು ಇನ್ನುಳಿದ ದಾಖಲೆಗಳನ್ನು ಯಾವುದಾದರೂ ವ್ಯಕ್ತಿ ಸಂಸ್ಥೆ ಅಥವಾ ಅಧಿಕಾರಿಗಳಿಂದ ಪಡೆಯಬಹುದಾದಲ್ಲಿ ಅವರ ಸಂಪೂರ್ಣ ಹೆಸರು ಹಾಗೂ ವಿಳಾಸವನ್ನು ತಿಳಿಸಬೇಕು.

ಮೇಲ್ಕಂಡ ಹೇಳಿಕೆ ಪ್ರಮಾಣ ಪತ್ರ ಹಾಗೂ ದಾಖಲೆಪಟ್ಟಿ ಹಾಗೂ ಸಾಕ್ಷಿಪಟ್ಟಿ ಕೊಡಲಿಚ್ಚಿಸುವವರು ಅವುಗಳ ಶ್ರೀ ಪ್ರತಿಗಳನ್ನು ಕಾರ್ಯದರ್ಶಿ ಶ್ರೀ ಬಸವಂತರಾಯ ಪಾಟೀಲ ವಿಚಾರಣಾ ಆಯೋಗ ಮತ್ತು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ನ್ಯಾಯಾಲಯ ಸಂಕೀರ್ಣ, ಬಾಗಲಕೋಟ ರಸ್ತೆ, ವಿಜಾಪೂರ ಈ ಆಯೋಗದ ಕಾರ್ಯದರ್ಶಿಯವರಿಗೆ ರಿಜಿಸ್ಟರ್ಡ್ ಅಂಚೆ ಮೂಲಕ ರವಾನಿಸಬಹುದು ಅಥವಾ ಖುದ್ದಾಗಿಯಾಗಲೀ ಅಥವಾ ಅಧಿಕೃತ ಏಜೆಂಟರ ಮೂಲಕವೇ ಆಗಲಿ ಸದರಿ ಕಾರ್ಯದರ್ಶಿಯವರಿಗೆ ಅಥವಾ ಅವರಿಂದ ಅಧಿಕಾರ ಪಡೆದ ಇತರೆ ಸಿಬ್ಬಂದಿಯವರಿಗೆ ವಿಚಾರಣಾ ಆಯೋಗದ ಕಛೇರಿಯಲ್ಲಿ ಕಾರ್ಯಾಲಯದ ಸಮಯದಲ್ಲಿ ಅಂದರೆ ಬೆಳಿಗ್ಗೆ 10-30 ರಿಂದ ಸಂಜೆ 4-30 ಗಂಟೆಯೊಳಗಾಗಿ ಸಲ್ಲಿಸತಕ್ಕದ್ದು.

ಸದರಿ ಹೇಳಿಕೆ ಪ್ರಮಾಣ ಪತ್ರ ವಗೈರೆಗಳನ್ನು ಕೊಡಲಿಚ್ಚಿಸುವವರು ದಿನಾಂಕ: 20ನೇ ಫೆಬ್ರವರಿ 2004 ರೊಳಗೆ ಆಯೋಗದ ಕಛೇರಿಗೆ ತಲುಪಿಸತಕ್ಕದ್ದು.

ಆಯೋಗದ ಆದೇಶದ ಮೇರೆಗೆ,

**ಎನ್.ಎಂ. ಕಿರೇಸೂರ್**

ಕಾರ್ಯದರ್ಶಿ, ಶ್ರೀ ಬಸವಂತರಾಯ ಪಾಟೀಲ ವಿಚಾರಣಾ ಆಯೋಗ ಮತ್ತು
ಮುಖ್ಯಆಡಳಿತಾಧಿಕಾರಿಗಳು, ಜಿಲ್ಲಾ ನ್ಯಾಯಾಲಯ, ವಿಜಾಪೂರ.

**SRI BASAVANTARAYA PATIL COMMISSION OF INQUIRY, BIJAPUR**
**(Constituted by Government of Karnataka under Notification No HD.33 PCE.2002 dtd: 1st October, 2003**

**Subject of Inquiry:** Incident of Poice firing on 4.7.2002 at Zalki Village, Taluka: Indi, District: Bijapur resulting in the death of four persons.

**Notification No.BPC/INQ/1/2004 Dated: 14th January 2004**

WHEREAS under Notification No.HD 33 PCE, 2002 Dated: 1st October, 2003 the Government of Karnataka has appointed a Commission of Inquiry headed by Sri Basavantaraya Patil, Prl. District and Sessions Judge, Bijapur under sub-section (3) of section 3 of the Commissions of Inquiry Act, 1952

(Central Act 60 of 1952) to inquire in to a definite matter of public importance viz., the incident of Police firing on 4th July 2002 resulting in the death of four persons in Zulki Village of Indi Taluka, Bijapur District and to make a report on the following terms of reference.

"Whether the circumstances under which the Police force, opening fire in the morning of 4th July 2002 to deal with the incident resulting in the death of Four pesons in the village was justified or not."

Therefore, in exercise of the powers conferred under the said Act and the Rules framed thereunder, the Commission of Inquiry hereby gives notice to all persons/Authorities/Associations acquainted with the subject matter of the Inquiry to furnish to the Commission statements relating to such matters specified in the Notification. Such statements should be in English/Kannada, in four sets disclosing the facts divided in to separate paragraphs.

Every statement so furnished in four sets shall be accompanied by an affidavit of the person furnishing the statement in support of the facts set out in the said statement. The affidavit shall be sworn to before an Authority empowered to administer oath. If the statement/affidavit is in a language other than English or Kannada, the same shall be accompanied by a true translation thereof in English.

The person furnishing the statement shall also furnish to the Commission along with the statement, a list of documents, if any, on which he proposes to rely and forward to the Commission, wherever practicable the originals or true copies of such of the documents as may be in his possession or power and shall state the name and address of the persons/Authority from whom the remaining documents, if any, may be obtained.

The statement together with the affidavit and the list of documents and witnesses, if any, may be sent to the Secretary, Sri Basavantaraya Patil Commission of Inquiry, and Prl. District and Sessions Judge, District Court Complex, Bagalkot Road, Bijapur 586101 by registered post with acknowledgement due or by personal delivery to the Secretary to the Commission or any other person authorised by him in this behalf, on any working day during office hours i.e. 10.30 a.m. to 4.30 p.m.

The statements should reach the Secretary to the Commission on or before 20th February, 2004 at Bijapur.

By Order of the Commission,
**N.M. KIRESUR**
Secretary,
Sri Basavantaraya Patil Commission of Inquiry &
Chief Administrative Officer, District Court, Bijapur.

P.R. 95

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-36:2003**

**ಅರ್ಜಿದಾರರು**

1. ಶ್ರೀಮತಿ ದಾನಮ್ಮ ಕೋಂ ಜಯರಾಮ್ ರೆಡ್ಡಿ
2. ಕು: ಜೆ. ಕಲಾವತಿ, ತಂದೆ: ಜಯರಾಮ್ ರೆಡ್ಡಿ
3. ಕು: ಜೆ. ಸುನಂಧ ತಂದೆ: ಜಯರಾಮ್ ರೆಡ್ಡಿ
4. ಕು: ಜೆ. ಮಂಜುಳ, ತಂದೆ: ಜಯರಾಮ್ ರೆಡ್ಡಿ ಬೀರನಾಕುಪ್ಪಂ ವಿಲೇಜ್, ಪಾರಂಡಹಳ್ಳಿ ಅಂಚೆ, ಕೋಲಾರ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀಮತಿ ಚಿನ್ನಮ್ಮ ಕೋಂ ಅಂಜನಪ್ಪ ರೆಡ್ಡಿ ಗೋವಿಂದಪುರ. ಜಾಡಗೇನಹಳ್ಳಿ ಅಂಚೆ, ಹೊಸಕೋಟೆ ತಾ: ಕೋಲಾರ ಜಿಲ್ಲೆ..
2. ದಿ ಬ್ರಾಂಚ್ ಮ್ಯಾನೇಜರ್ ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ನಂ.67:1, 1ನೇ ಮಹಡಿ, ರೆಡ್ಡಿ ಕಾಂಪ್ಲೆಕ್ಸ್, ವೈಟ್‌ಫೀಲ್ಡ್ ರಸ್ತೆ, ಮಹದೇವಪುರ ಅಂಚೆ, ಬೆಂಗಳೂರು-48.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ದಾನಮ್ಮ ಕೋಂ ಜಯರಾಮ್ ರೆಡ್ಡಿ, ಬೆಂಗಳೂರು-48 ಅವರು ತಮ್ಮ ಗಂಡ:ಮಗನಾದ ಶ್ರೀ ಜಯರಾಮ್ ರೆಡ್ಡಿ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಚಿನ್ನಮ್ಮ ಕೋಂ ಅಂಜನಪ್ಪ ರೆಡ್ಡಿ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 12-12-2001 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 31-12-2003 ರಂದು ನೀಡಲಾಗಿದೆ.

ಜಿ. ಚಿಕ್ಕಣ್ಣ

ಪಿ.ಆರ್. 99 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-35:2003**

**ಅರ್ಜಿದಾರರು**

1. ಶ್ರೀಮತಿ ಶಾಂತಮ್ಮ, 38 ವರ್ಷ ಕೋಂ ಲೇಟ್ ಕಿಟ್ಟಪ್ಪ, ಅಲಿಯಾಸ್ ಕೃಷ್ಣಪ್ಪ
2. ಕು: ಶಶಿಕಲಾ, 20 ವರ್ಷ ತಂದೆ: ಲೇಟ್ ಕಿಟ್ಟಪ್ಪ
3. ಶ್ರೀ ಬಾಬು, 15 ವರ್ಷ ಬಿನ್ ಲೇಟ್ ಕಿಟ್ಟಪ್ಪ, ಬಂಡಾರಹಳ್ಳಿ, ಮುಳಬಾಗಿಲು ತಾ:

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಅಮಾನುಲ್ಲಾ ಖಾನ್ ಬಿನ್ ಅಬ್ದುಲ್ ಸತ್ತಾರ್ ಖಾನ್, ನಂ.76, ಡಿ.ಸಿ.ಸಿ. ಬ್ಯಾಂಕ್ ಹತ್ತಿರ, ಕೋಲಾರ.
2. ಬಿ.ವಿ. ನಾಗರಾಜ್ ಬಿನ್ ವೆಂಕಟೇಶಪ್ಪ ಬಂದಾರಹಳ್ಳಿ ವಿಲೇಜ್, ಮುಳಬಾಗಿಲು ತಾಲ್ಲೂಕು.
3. ಮೆ: ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಬಾಗಲೂರು ಮ್ಯಾನ್‌ಷನ್, ಕೋಲಾರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಾಂತಮ್ಮ ಕೋಂ ಲೇಟ್ ಕಿಟ್ಟಪ್ಪ ಅವರು ತಮ್ಮ ಗಂಡ:ಮಗನಾದ ಶ್ರೀ ಕಿಟ್ಟಪ್ಪ ಅಲಿಯಾಸ್ ಕೃಷ್ಣಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಅಮಾನುಲ್ಲಾ ಖಾನ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 14-10-2000 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 31-12-2003 ರಂದು ನೀಡಲಾಗಿದೆ.

ಜಿ. ಚಿಕ್ಕಣ್ಣ

ಪಿ.ಆರ್. 100 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-40:2003**

**ಅರ್ಜಿದಾರರು**

1. ಶ್ರೀಮತಿ ಥೆರೆಸ್ಸಾ ಕೋಂ ಲೇಟ್ ಧನಪಾಲ್
2. ಕು: ಲತಾ ತಂದೆ: ಲೇಟ್ ಧನಪಾಲ್
3. ಕು: ಸುನಿತಾ ತಂದೆ: ಲೇಟ್ ಧನಪಾಲ್ ನಂ.255, 'ಬಿ' ಬ್ಲಾಕ್ ಚಾಂಪಿಯನ್ ರೀಫ್, ಕೆ.ಜಿ.ಎಫ್, ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀಮತಿ ಕಾರಮೈಲ್‌ನ ಕೋಂ ಆರ್. ಕ್ಲೆಟೆಸ್, ನಂ.1115, 7ನೇ ಕ್ರಾಸ್, ಪೈಪ್‌ಲೈನ್, ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್, ಕೋಲಾರ ಜಿಲ್ಲೆ.
2. ಮೆ: ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಬಾಗಲೂರು ಮ್ಯಾನ್‌ಷನ್, ದೊಡ್ಡಪೇಟೆ, ಕೋಲಾರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಥೆರೆಸ್ಸಾ ಅವರು ತಮ್ಮ ಗಂಡ:ಮಗನಾದ ಶ್ರೀ ಡಿ. ಜಗನ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಕಾರಮೈಲ್‌ನ ಕೋಂ ಆರ್. ಕ್ಲೆಟೆಸ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 24-8-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 101 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-41:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಎಸ್.ಎಂ. ಆಶಾ, 20 ವರ್ಷ ಕೋಂ ಲೇಟ್ ಎಲ್. ಶ್ರೀನಿವಾಸ್, ಕೇತನಹಳ್ಳಿ ವಿಲೇಜ್ ಮತ್ತು ಅಂಚೆ, ಮಂಡಿಕಲ್ ಹೋಬಳಿ, ಚಿಕ್ಕಬಳ್ಳಾಪುರ ಟೌನ್, ಕೋಲಾರ ಜಿಲ್ಲೆ.

1. ಎಂ.ವಿ. ಫಕ್ರುದ್ದೀನ್ ಬಿನ್ ಮಸ್ತಾನ್ ಸಾಬ್ ಟೆಂಪೋ ಮಾಲೀಕರು, ನಂ.569:1, ಹೂವಿನ ತೋಟ, ಟ್ಯಾಂಕ್‌ಬಂಡ್ ರಸ್ತೆ, ಯಲಹಂಕ, ಬೆಂಗಳೂರು.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್, ನಂ.16-3-474-ಎ, ಕೃಷ್ಣ ಮ್ಯಾನ್‌ಷನ್, ಮೇನ್ ಬಜಾರ್, ಹಿಂದೂಪುರ ಸಿಟಿ, ಅನಂತಪುರ ಜಿಲ್ಲೆ, ಆಂಧ್ರ ಪ್ರದೇಶ.

### ಪ್ರಕಟಣೆ

ಅರ್ಜಿದಾರರಾದ ಎಸ್.ಎಂ. ಆಶಾ ಅವರು ತಮ್ಮ ಗಂಡ:ಮಗನಾದ ಶ್ರೀ ಎಂ. ಶ್ರೀನಿವಾಸ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಎಂ.ವಿ. ಫಕ್ರುದ್ದೀನ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 1-11-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 102 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-42:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಪ್ರಮೀಳಾ ಕೋಂ ಶ್ರೀ ಇ. ವೆಂಕಟೇಶ್
2. ಶ್ರೀ ವಿ. ರಘು ಬಿನ್ ಶ್ರೀ ಇ. ವೆಂಕಟೇಶ
3. ವಿ. ಪ್ರಭು ಬಿನ್ ಶ್ರೀ ಇ. ವೆಂಕಟೇಶ
4. ವಿ. ಸುರ್ಯಕಲಾ ತಂದೆ: ಶ್ರೀ ಇ. ವೆಂಕಟೇಶ
5. ವಿ. ಚಂದ್ರಕಲಾ ತಂದೆ:ಶ್ರೀ ಇ. ವೆಂಕಟೇಶ

ಕೃಷ್ಣಗಿರಿ ಲೈನ್, ಮಾರಿಕುಪ್ಪಂ, ಕೆ.ಜಿ.ಎಫ್.

1. ಶ್ರೀಮತಿ ಅತಿಯಾ ಕೋಂ ಶ್ರೀ ಸೈಯದ್ ನವಾಜ್ ಎಸ್.ಎನ್.ಎಂ. ಸ್ಕೂಲ್ ರಸ್ತೆ, ಅಂಡರಸನ್ ಪೇಟೆ, ಕೋಲಾರ ಚಿನ್ನದ ಗಣಿ ಪ್ರದೇಶ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬಾಗಲೂರು ಮ್ಯಾನ್‌ಷನ್ 2ನೇ ಮಹಡಿ, ದೊಡ್ಡಪೇಟೆ, ಕೋಲಾರ.

### ಪ್ರಕಟಣೆ

ಅರ್ಜಿದಾರರಾದ ಶ್ರೀಮತಿ ಪ್ರಮೀಳಾ ಅವರು ತಮ್ಮ ಗಂಡ:ಮಗನಾದ ಶ್ರೀ ಇ. ವೆಂಕಟೇಶ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಅತಿಯಾ ಕೋಂ ಶ್ರೀ ಸೈಯದ್ ನವಾಜ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 30-8-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**
ಪಿ.ಆರ್. 103 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-43:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಕೃಷ್ಣಪ್ಪ, 55 ವರ್ಷ ಬಿನ್ ಮುನಿಸ್ವಾಮಿ
2. ಡಿ. ದೇವಿ, 45 ವರ್ಷ ಕೋಂ ಕೃಷ್ಣಪ್ಪ
ಪಾಲತಿಮಾನಹಳ್ಳಿ, ನಂ.13-ಎ, ಕೆ.ಜಿ.ಎಫ್ ರಸ್ತೆ, ಅಂಗನವಾಡಿ ಶಾಲೆಯ ಪಕ್ಕದಲ್ಲಿ, ಬಂಗಾರಪೇಟೆ-563 114.

ಎಂ.ಬಿ.ಎಸ್ ಪಾರ್ಸಲ್ ಸರ್ವೀಸ್(ರಿ) ರೆಹಮಾನ್ ಹಸನ್ ಫ್ಲೀಟ್ ಓವರ್ಸ್ ಅಂಚಿ ಟ್ರಾನ್ಸ್‌ಪೋರ್ಟ್, ಕಾಂಟ್ರಾಕ್ಟರ್ಸ್, ಕೇಂದ್ರ ಕಛೇರಿ, 5, 6ನೇ ಕ್ರಾಸ್, ಹೆಚ್. ಸಿದ್ದಯ್ಯ ರಸ್ತೆ, ಬೆಂಗಳೂರು-560 027

**ಪ್ರಕಟಣೆ**

ಅರ್ಜಿದಾರರಾದ ಕೃಷ್ಣಪ್ಪ ಬಿನ್ ಮುನಿಸ್ವಾಮಿ ಅವರು ತಮ್ಮ ಗಂಡ:ಮಗನಾದ ಶ್ರೀ ಕೆ. ಸುರೇಶ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಎಂ.ಜಿ.ಎಸ್. ಪಾರ್ಸಲ್ ಸರ್ವೀಸ್(ರಿ) ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 9-8-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**
ಪಿ.ಆರ್. 104 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-44:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ನಾರಾಯಣಮ್ಮ ಕೋಂ ಲೇಟ್ ವೆಂಕಟೇಶ್
2. ಎನ್. ಸರಸ್ವತಿ ಕೋಂ ಲೇಟ್ ವೆಂಕಟೇಶ್
3. ಕು: ವೆಂಕಟಲಕ್ಷ್ಮಿ ತಂದೆ: ಲೇಟ್ ವೆಂಕಟೇಶ
4. ಮಾ: ವೆಂಕಟರಮಣ ಬಿನ್ ಲೇಟ್ ವೆಂಕಟೇಶ
5. ಮಾ: ರವಿಕುಮಾರ್ ಬಿನ್ ಲೇಟ್ ವೆಂಕಟೇಶ
6. ಶ್ರೀ ಪಾಪಯ್ಯ ಬಿನ್ ಲೇಟ್ ವೆಂಕಟೇಶ್
7. ಶ್ರೀಮತಿ ಅಚ್ಚಮ್ಮ ಕೋಂ ಟಿ. ಪಾಪಯ್ಯ
ಬಂಬೂ ಬಜಾರ್ ಸ್ಟ್ರೀಟ್, ಚಿಂತಾಮಣಿ ಟೌನ್.

1. ಶ್ರೀಮತಿ ಹೆಚ್.ಎನ್. ಸುನೀತಾ ಕೋಂ ಹೆಚ್.ಎಂ. ನರೇಂದ್ರ ನಂ.687, ಸಿನಿಮಾ ರಸ್ತೆ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
2. ಮೆ: ನ್ಯಾಷನಲ್ ಇನ್‌ಷೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್, ನಂ.1974, ಸಿನಿಮಾ ರಸ್ತೆ, ಶ್ರೀನಿವಾಸ ಮಾರ್ಕೆಟ್ ಕಾಂಪ್ಲೆಕ್ಸ್, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ನಾರಾಯಣಮ್ಮ ಕೋಂ ಲೇಟ್ ವೆಂಕಟೇಶ ಅವರು ತಮ್ಮ ಗಂಡ:ಮಗನಾದ ಶ್ರೀ ವೆಂಕಟೇಶ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಹೆಚ್.ಎನ್. ಸುನೀತಾ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 15-4-2000 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 105 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-45:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ವೆಂಕಟಮ್ಮ ಕೋಂ ಲೇಟ್ ಸಿ. ವೆಂಕಟಪ್ಪ ಕೋತಿಗುಟ್ಟ ಪೆಂಗಾರಗುಂಟ ಅಂಚೆ, ಪಲಮನೇರ್ ತಾಲ್ಲೂಕು, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ.

1. ಎಸ್. ಸರ್ದಾರ್ ಬಿನ್ ಕರೀಂ ಸಾಹೇಬ್, ಆಯಕನು ಸ್ಟ್ರೀಟ್, ನ್ಯೂಪೇಟೆ, ಪಲಮನೇರ್, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಬಾಗಲೂರು ಮ್ಯಾನ್‌ಷನ್, ದೊಡ್ಡಪೇಟೆ, ಕೋಲಾರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ವೆಂಕಟಮ್ಮ ಅವರು ತಮ್ಮ ಗಂಡ:ಮಗನಾದ ಶ್ರೀ ಸಿ. ಲಕ್ಷ್ಮಯ್ಯ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಎಸ್. ಸರ್ದಾರ್ ಬಿನ್ ಕರೀಂ ಸಾಹೇಬ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 19-8-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 106 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-46:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಗಂಗುಲಮ್ಮ ಕೋಂ ಲೇಟ್ ಎಂ. ಸುಬ್ರಮಣಿ
2. ಕು: ರೂಪ ತಂದೆ: ಲೇಟ್ ಎಂ. ಸುಬ್ರಮಣಿ
3. ಕು: ವಿಜಯ ತಂದೆ: ಲೇಟ್ ಎಂ. ಸುಬ್ರಮಣಿ
4. ಮಾ: ಮದನ್ ಬಿನ್ ಲೇಟ್ ಎಂ. ಸುಬ್ರಮಣಿ
5. ಶ್ರೀ ಗುರಪ್ಪ ಬಿನ್ ಲೇಟ್ ವೆಂಕಟರಾಮಯ್ಯ
6. ಶ್ರೀಮತಿ ತಿಮ್ಮಕ್ಕ ಕೋಂ ಗುರಪ್ಪ ಪತಿಕೊಂಡ ವಿಲೇಜ್ ಮತ್ತು ಅಂಚೆ, ಗಂಗಾವರಂ ಮಂಡಲ್, ಪಲ್‌ಮನೇರ್ ತಾ: ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ.

1. ಎಸ್. ಸರ್ದಾರ್ ಬಿನ್ ಕರೀಂ ಸಾಹೇಬ್ ಆಯಕನು ಸ್ಟ್ರೀಟ್, ನ್ಯೂಪೇಟೆ, ಪಲಮನೇರ್, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಬಾಗಲೂರು ಮ್ಯಾನ್‌ಷನ್, ದೊಡ್ಡಪೇಟೆ, ಕೋಲಾರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಗಂಗುಲಮ್ಮ ಅವರು ತಮ್ಮ ಗಂಡ:ಮಗನಾದ ಶ್ರೀ ಸುಬ್ರಮಣಿ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಎಸ್. ಸರ್ದಾರ್ ಬಿನ್ ಕರೀಂ ಸಾಹೇಬ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 19-8-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 107 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ-47:2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಶಿರಮಾಕಾನಿ ಕೋಂ ಲೇಟ್ ಎಸ್. ಥಾವಸಿ ಮುತ್ತು<br>2. ಕು: ಅರುಣ ಶಿಲ್ಪ, (3) ಕು: ಸುಗುಣ ಶಿಲ್ಪ ನಂ.21, ಪುರುಷೋತ್ತಮ್ ರಸ್ತೆ, ದಶರತ್‌ಪುರಂ, ಸಾಲಿಗ್ರಾಮ್, ಚೆನ್ನೈ-03, ತಮಿಳುನಾಡು. | | 1. ಶ್ರೀ ಜಿ.ಟಿ. ರಾಜನ್ ಬಿನ್ ಜಾರ್ಜ್ ನಂ.5:9, ವಿ.ಜಿ. ನಾಯರ್ ಸ್ಟ್ರೀಟ್ ದಶರತ್‌ಪುರಂ, ಸಾಲಿಗ್ರಾಮ, ಚೆನ್ನೈ-03, ತಮಿಳುನಾಡು.<br>2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಬಾಗಲೂರು ಮ್ಯಾನ್‌ಷನ್ ದೊಡ್ಡಪೇಟೆ, ಕೋಲಾರ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಿರಮಾಕಾನಿ ಅವರು ತಮ್ಮ ಗಂಡ:ಮಗನಾದ ಶ್ರೀ ಎಸ್. ಥಾವಸಿ ಮುತ್ತು ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಜಿ.ಟಿ. ರಾಜನ್ ಬಿನ್ ಜಾರ್ಜ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 17-10-2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 19-1-2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 108 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಸಂತೇಮಾವತ್ತೂರು ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಉಲ್ಲೇಖ:**
1. ರೇಷ್ಮೆ ಜಂಟಿನಿರ್ದೇಶಕರು, ಬಿಳಿದೇವಾಲಯ ಇವರ ಪತ್ರ ಸಂಖ್ಯೆ:ರೇಜಂನಿ:ಬಿದೇ:ಸಿಬ್ಬಂದಿ:ಅಗೈಹಾ: ಶಿಸ್ತುಕ್ರಮ:5:03-04 ದಿನಾಂಕ: 17-04-2003.
2. ರೇಷ್ಮೆ ಜಂಟಿನಿರ್ದೇಶಕರು, ಬಿಳಿದೇವಾಲಯ ಇವರ ಪತ್ರ ದಿನಾಂಕ 19-09-2003
3. ರೇಷ್ಮೆ ನಿರ್ದೇಶನಾಲಯದ ತಿಳುವಳಿಕೆ ಪತ್ರ ಸಂಖ್ಯೆ ಸಿಬ್ಬಂದಿ-3(ಬಿ):ಶಿಸ್ತು:5:03-04 ದಿನಾಂಕ 06-10-2003.
4. ರೇಷ್ಮೆ ವಿಸ್ತರಣಾ ಅಧಿಕಾರಿ, ತಾಂತ್ರಿಕ ಸೇವಾ ಕೇಂದ್ರ, ಸಂತೇಮಾವತ್ತೂರು ಇವರ ಪತ್ರ ದಿನಾಂಕ 31-10-2003.

**ಪ್ರಸ್ತಾವನೆ:**

ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು, 26-05-2002 ರಿಂದ 01-06-2002 ರವರೆಗೆ ಸಾಂದರ್ಭಿಕ ರಜೆಯ ಮೇಲೆ ತೆರಳಿದವರು ಈ ವರೆಗೂ ಕಛೇರಿ ಕೆಲಸಕ್ಕೆ ಬಂದಿರುವುದಿಲ್ಲವೆಂದು ಉಲ್ಲೇಖ (1) ರ ದಿನಾಂಕ 17-04-2003 ರಲ್ಲಿ ರೇಷ್ಮೆ ಜಂಟಿನಿರ್ದೇಶಕರು, ಬಿಳಿದೇವಾಲಯ ರವರು ಶಿಸ್ತು ಕ್ರಮಕ್ಕಾಗಿ ವರದಿ ಸಲ್ಲಿಸಿದ್ದರು. ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು ಅನಧಿಕೃತ ಗೈರು ಹಾಜರಾಗಿರುವುದರ ಬಗ್ಗೆ ಕಛೇರಿ ಕೆಲಸಕ್ಕೆ ಹಾಜರಾಗುವಂತೆ ದಿನಾಂಕ 28-08-2003

ರಂದು ಜನವಾಹಿನಿ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಸದರಿ ಪ್ರಕಟಣೆಗೆ ಯಾವುದೇ ರೀತಿ ಈ ನೌಕರರು ಸ್ಪಂದಿಸದಿರುವುದರಿಂದ ಉಲ್ಲೇಖ (3)ರ ದಿನಾಂಕ 06-10-2003 ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11 ರ ಮೇರೆಗೆ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಿ ಆರೋಪ ಕುರಿತಂತೆ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು.

ಆರೋಪ:- "ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಸಂತೆಮಾವತ್ತೂರು ಆದ ನೀವು ದಿನಾಂಕ 26-05-2002 ರಿಂದ 01-06-2002 ರ ವರೆಗೆ ಸಾಂದರ್ಭಿಕ ರಜೆಯನ್ನು ಹಾಕಿ ತದನಂತರ ಇಂದಿನ ವರೆಗೂ ಕೆಲಸಕ್ಕೆ ಹಾಜರಾಗದೆ ಕರ್ತವ್ಯ ನಿರ್ಲಕ್ಷ್ಯತೆಯನ್ನು ತೋರಿರುವುದು."

ಸದರಿ ತಿಳುವಳಿಕೆ ಪತ್ರವನ್ನು ಸೇವಾವಹಿಯಲ್ಲಿರುವ ವಿಳಾಸಕ್ಕೆ ಜಾರಿಗೊಳಿಸಲು ಹೋದಾಗ ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು ತಂಗಿಯಾದ ಶ್ರೀಮತಿ ಎನ್. ಪ್ರೇಮಕುಮಾರಿಯವರು ಅವರ ಅಣ್ಣನಾದ ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು ಸುಮಾರು ಒಂದೂವರೆ ವರ್ಷದಿಂದ ಆ ವಿಳಾಸದಲ್ಲಿ ಇರುವುದಿಲ್ಲವೆಂದು ಹಾಗೂ ಎಷ್ಟು ಹುಡುಕಿದರೂ ಸಿಕ್ಕಿರುವುದಿಲ್ಲವೆಂದು ದಿನಾಂಕ 14-10-2003, 16-10-2003 ಹಾಗೂ 17-10-2003 ರಲ್ಲಿ ಲಿಖಿತವಾಗಿ ಹೇಳಿಕೆಯನ್ನು ನೀಡಿರುತ್ತಾರೆ.

ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು, ದಿನಾಂಕ 28-08-2003 ರಲ್ಲಿ ಕಛೇರಿ ಕೆಲಸಕ್ಕೆ ಹಾಜರಾಗುವಂತೆ ಸೂಚಿಸಿದ ಪ್ರಕಟಣೆಗೆ ಯಾವ ರೀತಿಯಲ್ಲಿ ಸ್ಪಂದಿಸಿಲ್ಲದ್ದರಿಂದ ಹಾಗೂ ಶ್ರೀನಾಥರವರ ತಂಗಿಯಾದ ಶ್ರೀಮತಿ ಎನ್. ಪ್ರೇಮಕುಮಾರಿಯವರು ಅವರ ಅಣ್ಣನಾದ ಶ್ರೀ ಎನ್. ಶ್ರೀನಾಥ, ಸುಮಾರು ಒಂದೂವರೆ ವರ್ಷದಿಂದ ಮನೆಯಲ್ಲಿ ಇರುವುದಿಲ್ಲ ಹಾಗೂ ಎಷ್ಟು ಹುಡುಕಿದರೂ ಸಿಕ್ಕಿರುವುದಿಲ್ಲವೆಂದು ಲಿಖಿತವಾಗಿ ಹೇಳಿಕೆಯನ್ನು ನೀಡಿರುವುದನ್ನು ಪರಿಶೀಲಿಸಿ ಹಾಗೂ ಸಿ.ಸಿ.ಎ. ನಿಯಮ 14(2) ನ್ನು ಚಲಾಯಿಸಲು ನಿರ್ಧರಿಸಿ ಈ ಆದೇಶ.

**ಸಂಖ್ಯೆ: ಸಿಬ್ಬಂದಿ:3(ಬಿ):ಶಿಸ್ತು:5:2003-04, ದಿನಾಂಕ: 29ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957 ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11 ಎ ನಿಯಮಗಳನುಸಾರ ಮತ್ತು 9ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು ಆದ ನಾನು, ಕೆಲಸಕ್ಕೆ ಅನಧಿಕೃತವಾಗಿ ದಿನಾಂಕ 02-06-2002 ರಿಂದಲೂ ಗೈರು ಹಾಜರಾಗುತ್ತಿರುವ ಶ್ರೀ ಎನ್. ಶ್ರೀನಾಥ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಸಂತೆಮಮಾವತ್ತೂರು ಇವರನ್ನು ಸದರಿ ನಿಯಮಗಳ 8(7) ರಲ್ಲಿ ನಿರ್ದಿಷ್ಟಪಡಿಸಿರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿರುತ್ತೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು,
ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 109

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್‌ಆರ್-1:2004**

**ಅರ್ಜಿದಾರರು**

1. ಶ್ರೀಮತಿ ಶೈಲಾ ಅಲಿಯಾಸ್ ಶೈಲಜಾ, 26 ವರ್ಷ ಕೋಂ ಲೇಟ್ ದಿಲೀಪ್‌ಕುಮಾರ್ ಜೈನ್
2. ಶ್ರೀಮತಿ ಪಿಸ್ತಾಬಾಯಿ ಕೋಂ ಮೋಹನ್ ಲಾಲ್, 60 ವರ್ಷ ವಾಸ:ಮೇನ್ ರೋಡ್, ಬೇಲೂರು.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಬಿ.ಎಸ್. ಪ್ರಕಾಶ್‌ಕುಮಾರ್ ಬಿನ್ ಸಂಪಂಗಿ ನಾಯ್ಡು, 37 ವರ್ಷ ವಾಸ: ಚನ್ನಕೇಶವಗೌಡ ಸ್ಟ್ರೀಟ್, ಬೇಲೂರು ಟೌನ್, ಹಾಸನ ಜಿಲ್ಲೆ.
2. ದಿ ಡಿವಿಜನಲ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್, ಕಾಫಿ ಕೃಪಾ, ಎಂ.ಜಿ. ರೋಡ್, ಮಡಿಕೇರಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ದಿಲೀಪ್‌ಕುಮಾರ್ ಜೈನ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 3-5-2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್. 110